KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೨ | ಬೆಂಗಳೂರು, ಗುರುವಾರ, ಜನವರಿ ೪, ೨೦೦೭ (ಪುಷ್ಯ ೧೪, ಶಕ ವರ್ಷ ೧೯೨೮) | ಸಂಚಿಕೆ ೧ |
|---|---|---|



## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಂದಾಯ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಕಂಇ 90 ಎಲ್‌ಆರ್‌ಎ 2006, ಬೆಂಗಳೂರು, ದಿನಾಂಕ:27ನೇ ನವೆಂಬರ್, 2006**

ಕರ್ನಾಟಕ ಲಿಂಗಾಯಿತ ಎಜುಕೇಷನ್ ಸೊಸೈಟಿ, ಬೆಳಗಾವಿ ಇವರು ಹುಬ್ಬಳ್ಳಿ ತಾಲ್ಲೂಕು ಗೋಕುಲ ಗ್ರಾಮದ ಬ್ಲಾಕ್ ನಂ.3ಎ/6ರಲ್ಲಿ 03 ಎಕರೆ 08 ಗುಂಟೆ, ಸ.ನಂ.50/1ರಲ್ಲಿ 03 ಎಕರೆ, ಸ.ನಂ.2ಎ/1ರಲ್ಲಿ 03 ಎಕರೆ ಹಾಗೂ ಸ.ನಂ.2ಎ/2ರಲ್ಲಿ 01 ಎಕರೆ ಹೀಗೆ ಒಟ್ಟು 10 ಎಕರೆ 08 ಗುಂಟೆ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಮಾಡಿದ ಬೇಡಿಕೆ ಹಾಗೂ ನಮೂನೆ 15ಎ ಮತ್ತು 15ಎಎ ಗಳಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರು ತಮ್ಮ ಪತ್ರ ಸಂಖ್ಯೆ: ಕೆಎಲ್‌ಆರ್/ವಿಸಿಆರ್/12/2006-07 ದಿನಾಂಕ: 16.10.2006ರಲ್ಲಿ ಪ್ರಸ್ತಾಪಿತ ಗ್ರಾಮಗಳ ಮೇಲ್ಕಂಡ ಸ.ನಂ.ಗಳಲ್ಲಿ ಒಟ್ಟು 10 ಎಕರೆ 08 ಗುಂಟೆ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 109 (1) (ii) ರಡಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಬಾಂಬೆ ಪಬ್ಲಿಕ್ ಟ್ರಸ್ಟ್ ಕಾಯ್ದೆ 1950 ರಡಿ ದಿನಾಂಕ: 18.9.1982 ರಂದು ನೋಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನು ಖಾತೆದಾರರಿಂದ ಖರೀದಿ ಪಡೆಯಲು ಕರಾರು ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಬಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109 (1) (ii)ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109 (1) (ii) ಮತ್ತು ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ನಿಯಮಗಳು 1996ರ ನಿಯಮ 38ಬಿ (2) (ಎ) ಮತ್ತು (ಬಿ)ರಲ್ಲಿನ ಷರತ್ತುಗಳು ಪೂರೈಸಿದ್ದು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಮತ್ತು 80ಕ್ಕೆ ವಿನಾಯಿತಿ ನೀಡಿ ಕರ್ನಾಟಕ ಲಿಂಗಾಯಿತ ಎಜುಕೇಷನ್ ಸೊಸೈಟಿ, ಬೆಳಗಾವಿ ಇವರಿಗೆ ಹುಬ್ಬಳ್ಳಿ ತಾಲ್ಲೂಕು ಗೋಕುಲ ಗ್ರಾಮದ ಬ್ಲಾಕ್ ನಂ.3ಎ/6ರಲ್ಲಿ 03 ಎಕರೆ 08 ಗುಂಟೆ, ಸ.ನಂ.50/1ರಲ್ಲಿ 03 ಎಕರೆ, ಸ.ನಂ.2ಎ/1ರಲ್ಲಿ 03 ಎಕರೆ ಹಾಗೂ ಸ.ನಂ.2ಎ/2ರಲ್ಲಿ 01 ಎಕರೆ ಹೀಗೆ ಒಟ್ಟು 10 ಎಕರೆ 08 ಗುಂಟೆ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿ ಪಡೆಯಲು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷದೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇ.51 ಪೇಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ

ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಸದರಿ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಓ.ಡಿ.ಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1)ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೋತ್ತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನೆ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಜಮೀನನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 1711

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಭೂಸುಧಾರಣೆ)

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act 2003 - Clarification under Section 59(4) regarding rate of tax applicable on "P.V.C.Insulated Copper Wire/Cable".

**Ref:** Application dated 25.10.2006 of M/s Havell's India Limited, No.308, 3rd Floor, 19, Brigade Gardens, Church Street, Bangalore-560 001.

In its application cited at reference above, the applicant has sought clarification regarding rate of tax applicable on "P.V.C. Insulated Copper Wire/Cable".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.170/06-07, Dated: 30th November 2006**

It is hereby clarified that "Electrical Cables for a voltage exceeding 1000 volts" is taxable at 4% under sl.no.52 of the Third Schedule to the Karnataka Value Added Tax Act, 2003.

**B.A. HARISH GOWDA**

P.R. 1709

Commissioner of Commercial Taxes,
(Karnataka), Bangalore.

## VIIITH ADDL. CHIEF METROPOLITAN MAGISTRATE, BANGALORE

**ವಿಷಯ:** ವಾರಸುದಾರರಿಲ್ಲದ ಮಾಲುಗಳ ಮಾಲಿಕರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:** ಹೈಗ್ರೌಂಡ್ಸ್ ಪೊಲೀಸ್ ಠಾಣೆ ನಂ.ಕ್ಯೂ.3/ಸಿ.ಸಿ.ನಂ. 188/06

ಈ ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ ಹೈಗ್ರೌಂಡ್ಸ್ ಪೊಲೀಸ್ ಠಾಣೆಯಲ್ಲಿ ಈ ಕೆಳಕಂಡ ವಾರಸುದಾರರು ಪತ್ತೆಯಾಗದೇ ಇರುವ ವಾಹನ ಹಾಗೂ ಇತರೆ ಮಾಲುಗಳ ವಾರಸುದಾರರನ್ನು ಪತ್ತೆ ಮಾಡಲು ಠಾಣಾ ವತಿಯಿಂದ ಎಲ್ಲಾ ಪ್ರಯತ್ನಗಳನ್ನು ಮಾಡಿದ್ದು, ಸದ್ಯಕ್ಕೆ ವಾರಸುದಾರರು ಯಾರೂ ಪತ್ತೆಯಾಗಿಲ್ಲವೆಂದು ಸರ್ಕಾರಿ ರಾಜ್ಯ ಪತ್ರದಲ್ಲಿ ವಿವರವನ್ನು ಪ್ರಕಟಿಸಲು ಆದೇಶ ಮಾಡಲು ಕೋರಿರುತ್ತಾರೆ. ಪ್ರಯುಕ್ತ ಈ ಕೆಳಗೆ ನಮೂದು ಮಾಡಿರುವ ವಿವರಗಳನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಚುರಪಡಿಸಲು ಈ ಮೂಲಕ ಸೂಚಿಸಲಾಗಿದೆ.

| ಕ್ರ. ಸಂ. | ಸಿಮಿಸ್/ ಮೊ ನಂ. | ಪಿಎಫ್ ನಂ. | ಹೆಸರು | ರಿಜಿಸ್ಟ್ರೇಷನ್ ಸಂಖ್ಯೆ | ಛಾಸಿಸ್ ನಂ & ಇಂಜಿನ್ ನಂ |
|---|---|---|---|---|---|
| 1 | 448/05 | 109/05 | Hero Honda Splendor | KA-04-A-7052 | 01420C13547 01418MO9710 |
| 2 | 455/05 | 113/05 | Bajaj | KA-04-U-9287 | 35BEC27987 |
| 3 | 461/05 | 117/05 | TVS Champ | CKH-4692 | 9905F223394 C905M225383 |
| 4 | 449/05 | 111/05 | YEZDI | CKJ-3374 | 044032049186 IJCL2250044032 |
| 5 | 445/05 | 106/05 | Yamaha RX-135 | KA-04-Y-7683 | 01A-IL 7019005 IL7019005 |
| 6 | 354/06 | 68/06 | TVS XL Super | KA-05-EB-3176 | P1908F158670 |
| 7 | 355/06 | 69/06 | Kinetic Honda | KA-25-E-472 | NIE-D054950 |
| 8 | 356/06 | 70/06 | Kinetic Honda | KA-03-L-2093 | QIFW148 NIEKM-472095 |
| 9 | 357/06 | 71/06 | Yamaha | KA-05-S-7051 | 96EILS-003516 |
| 10 | 583/93 | 202/93 | 2 Car Stereos | | |
| 11 | 583/93 | 204/93 | 1 Car Stereo | | |
| 12 | 105/97 | 20/97 | 1 Sony Car Stereo, 1 Car Stereo | | |
| 13 | 105/97 | 19/97 | 1 Pioneer Car Stereo | | |
| 14 | 43/98 | 10.98 | 3 Pieces of Nickon Camera | | |

VIIIth Addl. Chief Metropolitan
P.R. 1710 Magistrate, Bangalore.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು ಇವರ ನಡವಳಿಕೆಗಳು**

**ಸಿಇಪಿ ಸಂಖ್ಯೆ: ಎಆರ್‌ಬಿ 50:59:2005-06, ದಿನಾಂಕ: 30ನೇ ನವೆಂಬರ್ 2006**

**ವಿಷಯ:** ಗ್ರೀನ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ, ಸಂಪಂಗಿರಾಮನಗರ, ಬೆಂಗಳೂರು ಈ ಸಂಘದ ಅಮಲ್ಜಾರಿ ಸಂಖ್ಯೆ ಎಆರ್‌ಬಿ 50:ಅಮಲ್ಜಾರಿ 539:2004-05ಕ್ಕೆ ಸಂಬಂಧಪಟ್ಟಂತೆ ಮಾರಾಟ ಮಾಡಲಾದ ಸಾಲಗಾರರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 38(7)(ಎ) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:**
1. ದಾವಾ ಸಂಖ್ಯೆ: ಎಆರ್‌ಬಿ 50:ಎಬಿಎನ್:10:2003-04 ದಿನಾಂಕ:19.11.2004.
2. ಅಮಲ್ಜಾರಿ ಸಂಖ್ಯೆ ಎಆರ್‌ಬಿ 50:539:2004-05
3. ಮಾರಾಟಾಧಿಕಾರಿ ಮತ್ತು ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ವರದಿಯ ಪತ್ರದ ನಂ.ಸಅಅ:ಬೆಂದತಾ:70:2006-07 ದಿನಾಂಕ:5.10.2006.

ಶ್ರೀ ಎ.ಪಿ. ಅಶೋಕ ಬಿನ್ ತಿಮ್ಮೇಗೌಡ, ನಂ.256, ರಾಮರೆಡ್ಡಿ ಬಿಲ್ಡಿಂಗ್, ರಾಮ ಟೆಂಪಲ್ ಸ್ಟ್ರೀಟ್, ಎಲ್.ಆರ್.ರೆಡ್ಡಿ ಸರ್ಕಲ್, ಕಾಡುಗೋಡಿ, ಬೆಂಗಳೂರು-67 ಇವರು ಗ್ರೀನ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ, ಸಂಪಂಗಿರಾಮನಗರ, ಬೆಂಗಳೂರು ಈ ಸಂಘದಲ್ಲಿ ಸದಸ್ಯತ್ವದ ಸಂಖ್ಯೆ 785 ಹೊಂದಿದ್ದು, ದಿನಾಂಕ 10.5.2002 ರಂದು ನಿವೇಶನದ ಆಧಾರವಾಗಿಟ್ಟು ರೂ. 1,50,000-00 ಗಳನ್ನು ಸಾಲವಾಗಿ ಪಡೆದು, ಸದರಿ ಸಂಘದ ಸಾಲವನ್ನು ಸಂಘದ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾಗಿದ್ದ ಕಾರಣ ಸಂಘದ ಕಾರ್ಯದರ್ಶಿಯವರು ಸುಸ್ತಿ ಸಾಲದ ಬಾಕಿ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು ದಾವಾ ಸಂಖ್ಯೆ: ಎಆರ್‌ಬಿ 50:ಎಬಿಎನ್:10:2003-04 ದಿನಾಂಕ:19.11.2004 ರಲ್ಲಿ ಅವಾರ್ಡ್ ಪಡೆಯಲಾಗಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಮಲ್ಲೇಶ್ವರಂ, ಬೆಂಗಳೂರು ಇವರ ನ್ಯಾಯಾಲಯದಿಂದ ಪಡೆದ ಅವಾರ್ಡ್ ಆದೇಶದನುಸಾರ ಗ್ರೀನ್ ಪತ್ತಿನ ಸಹಕಾರ ಸಂಘ ನಿ ಸಂಪಂಗಿರಾಮನಗರ, ಬೆಂಗಳೂರು ಇದರ ಕಾರ್ಯದರ್ಶಿಯವರು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 34(1) ರನ್ವಯ ಮಾರಾಟಾಧಿಕಾರಿ ಮತ್ತು ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ಕಛೇರಿಯಲ್ಲಿ ಅಮಲ್ಜಾರಿ ಸಂಖ್ಯೆ:ಎಆರ್‌ಬಿ 50:ಸಿಇಪಿ:539:2004-05 ರಂತೆ ಕ್ರಮ ತೆಗೆದುಕೊಳ್ಳಲು ದಾಖಲು ಮಾಡಿದ್ದು ಸದರಿ ಅಮಲ್ಜಾರಿ ಅರ್ಜಿಯ ಮೇಲೆ ವಸೂಲಾತಿ ಕ್ರಮ ಜರುಗಿಸಲು ಶ್ರೀ ಎ.ಪಿ. ಅಶೋಕರವರು ಸಂಘಕ್ಕೆ ಈಡು ಮಾಡಿದ್ದ ನಿವೇಶನ ಸಂಖ್ಯೆ 132, ಸರ್ವೆ ನಂ.11:3 ಮತ್ತು 11:4 ಪಟ್ಟಣಗೆರೆ ಸಿ.ಎಂ.ಸಿ ಖಾತಾ ನಂ.161 ಚೌಡೇನಪುರ, ಗೋಡಿಪಾಳ್ಯ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಈ ಸ್ಥಿರಾಸ್ತಿಯನ್ನು ದಿನಾಂಕ:10.9.2006 ರಂದು ಸಾರ್ವಜನಿಕ ಹರಾಜಿಗೆ ತಂದು ಮಾರಾಟ ಮಾಡಿರುತ್ತಾರೆ. ದಿನಾಂಕ 10.9.2006 ರಂದು ನಡೆಸಿದ ಸಾರ್ವಜನಿಕ ಹರಾಜಿನಲ್ಲಿ ಒಟ್ಟು 3 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ 1ನೇ ಬಿಡ್ಡುದಾರರಾದ ಶ್ರೀ ಕಲ್ಯಾಣಿ ನಾಗರಾಜ್, ನಂ.1903, 7ನೇ ಮುಖ್ಯರಸ್ತೆ,

'ಇ' ಬ್ಲಾಕ್ 2ನೇ ಹಂತ, ರಾಜಾಜಿನಗರ, ಬೆಂಗಳೂರು-10 ಇವರು ರೂ.3,10,000-00 (ಮೂರು ಲಕ್ಷ ಹತ್ತು ಸಾವಿರ ಮಾತ್ರ) ಗಳಿಗೆ ಬಿಡ್ ಮಾಡಿ, ಅತಿ ಹೆಚ್ಚಿನ ಬಿಡ್ಡುದಾರರಾಗಿರುವ ಪ್ರಯುಕ್ತ ಮಾರಾಟಾಧಿಕಾರಿ ಮತ್ತು ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರು ಹರಾಜಿನ ಬಿಡ್ಡನ್ನು ಶ್ರೀ ಕಲ್ಯಾಣಿ ನಾಗರಾಜ್ ರವರ ಹೆಸರಿಗೆ ನಿಲ್ಲಿಸಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿ ಪ್ರಕಾರ ಅಸಲು, ಬಡ್ಡಿ ಮತ್ತು ಇತರೆ ವೆಚ್ಚ ಸೇರಿ ಒಟ್ಟು ರೂ.1,70,940-00 ದಿನಾಂಕ:19.11.2004 ರಿಂದ ಬರಬೇಕಾದ ಬಡ್ಡಿ ಮತ್ತು ಇತರೆ ಖರ್ಚುಗಳು ಸಂಘಕ್ಕೆ ಬರಬೇಕಾಗಿರುತ್ತದೆ. ಮಾರಾಟಾಧಿಕಾರಿಯವರು ಹರಾಜಿಗೆ ತಂದಿರುವ ಆಸ್ತಿಯ ಮೌಲ್ಯವನ್ನು ರಿಜಿಸ್ಟರ್ ಮೌಲ್ಯಮಾಪಕರು ರೂ.2,40,000-00 ಗಳಿಗೆ ಮೌಲ್ಯಮಾಪನ ಮಾಡಿರುತ್ತಾರೆ. ಬಹಿರಂಗ ಹರಾಜಿನಲ್ಲಿ ಶ್ರೀ ಎ.ಪಿ. ಅಶೋಕ ರವರ ಆಸ್ತಿಯನ್ನು ಖರೀದಿಸಿದ ಶ್ರೀ ಕಲ್ಯಾಣಿ ನಾಗರಾಜ್ ರವರು ಬಿಡ್ ಮೊತ್ತದ ಶೇ. 15 ಮೊಬಲಗು ಅಂದರೆ ರೂ.45315-00 ಗಳನ್ನು ಹರಾಜಿನ ಸ್ಥಳದಲ್ಲಿಯೇ ಡಿಕ್ರಿದಾರರ ಸಂಘಕ್ಕೆ ಪಾವತಿಸಿರುತ್ತಾರೆ. ಉಳಿಕೆ ಬಾಕಿ ಹಣ ಮತ್ತು ನೊಂದಣಿ ವೆಚ್ಚವನ್ನು ನಿಗದಿತ ಅವಧಿಯಲ್ಲಿ ಪಾವತಿಸುವುದಾಗಿ ಮಾರಾಟಾಧಿಕಾರಿಗಳು ವರದಿ ಮಾಡಿರುತ್ತಾರೆ.

ಮಾರಾಟಾಧಿಕಾರಿಯವರು ದಿನಾಂಕ:10.9.2006 ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ನಡವಳಿಕೆಯನ್ನು ಮಾಡಿ ಎ.ಪಿ. ಅಶೋಕ ರವರ ಸ್ಥಿರ ಸ್ವತ್ತನ್ನು ಶ್ರೀ ಕಲ್ಯಾಣಿ ನಾಗರಾಜ್ ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:10.9.2006 ರಂದು ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 3 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಅಧಿಕೃತ ಬಿಡ್ಡುದಾರರಾದ ಶ್ರೀ ಕಲ್ಯಾಣಿ ನಾಗರಾಜ್ ರವರಿಗೆ ರೂ.3,10,000-00 (ಮೂರು ಲಕ್ಷ ಹತ್ತು ಸಾವಿರ ಮಾತ್ರ) ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳೊಳಗಾಗಿ ಬಾಕಿದಾರರು ವಾದಿ ಸಂಘಕ್ಕೆ ಪಾವತಿಸಬೇಕಾದ ಬಾಕಿ ಸಾಲವನ್ನು ಮರುಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಈ ಕಚೇರಿಗೆ ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವುದರಿಂದ ದಿನಾಂಕ 10.9.2006 ರಂದು ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿ ಹರಾಜನ್ನು ಸ್ಥಿರೀಕರಣಗೊಳಿಸಬಹುದೆಂದು ಉಲ್ಲೇಖ (3)ರಂತೆ ಸಲ್ಲಿಸಿರುವ ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನು ಬದ್ಧವಾಗಿದೆಯೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ ಮಾರಾಟ ಸ್ಥಿರೀಕರಣ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಎನ್. ಸಣ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಹಾಗೂ ವಸೂಲಾಧಿಕಾರಿಗಳು, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ ಸಹಕಾರ ಸಂಘದ ಕಟ್ಟಡ ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:295:ಸಿಎಲ್ಎಂ:2005-06 ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7)(ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಂಖ್ಯೆ: ಎಆರ್‌ಬಿ 50:539:2004-05 ರಲ್ಲಿನ ಸಾಲದ ಬಾಕಿ ವಸೂಲಿಗಾಗಿ ಎ.ಪಿ. ಅಶೋಕ ಸಂಘದ ಸದಸ್ಯತ್ವದ ಸಂಖ್ಯೆ 785 ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ:10.9.2006 ರಂದು ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಕಲ್ಯಾಣಿ ನಾಗರಾಜ್, ನಂ.1093, 7ನೇ ಮುಖ್ಯರಸ್ತೆ, 'ಇ' ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು-10 ಇವರು ಅತಿಹೆಚ್ಚಿನ ಬಿಡ್ಡುದಾರರಾಗಿದ್ದು ಇವರಿಗೆ ರೂ.3,10,000-00 (ಮೂರು ಲಕ್ಷ ಹತ್ತು ಸಾವಿರ ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ಸೈಟ್ ನಂ.132, ಸರ್ವೆ ನಂ.11:3 ಮತ್ತು 11:4, ಪಟ್ಟಣಗೆರೆ ಸಿ.ಎಂ.ಸಿ, ಖಾತಾ ನಂ.161, ಚೌಡೇನಪುರ, ಕೋಡಿಪಾಳ್ಯ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಈ ಸ್ವತ್ತಿನ ಅಳತೆ ಉತ್ತರ ದಕ್ಷಿಣ 30 ಅಡಿ, ಪೂರ್ವ ಪಶ್ಚಿಮ 40 ಅಡಿ ಅಳತೆಯುಳ್ಳ ನಿವೇಶನ ಚೆಕ್ಕುಬಂದಿ

ಪೂರ್ವಕ್ಕೆ - ಸ್ವತ್ತಿನ ನಂ.125
ಪಶ್ಚಿಮಕ್ಕೆ - ರಸ್ತೆ
ಉತ್ತರಕ್ಕೆ - ಸ್ವತ್ತಿನ ನಂ.131
ದಕ್ಷಿಣಕ್ಕೆ - ಸ್ವತ್ತಿನ ನಂ.133
ಮಾರಾಟದ ಮೊಬಲಗು - ರೂ.3,10,000-00
ಮಾರಾಟ ಮಾಡಿದ ದಿನಾಂಕ - 10.09.2006

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ: 30.11.2006 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ,
ಬೆಂಗಳೂರು ಹಾಗೂ ವಸೂಲಾಧಿಕಾರಿಗಳು ನಂ.146, ಮಲ್ಲೇಶ್ವರಂ,
ಸಹಕಾರ ಸಂಘದ ಕಟ್ಟಡ, ಬೆಂಗಳೂರು-03

ಪಿ.ಆರ್. 1712

## ಮಹಾನಗರ ದಂಡಾಧಿಕಾರಿ ಒಂದನೇ ಸಂಚಾರ ನ್ಯಾಯಾಲಯ ಬೆಂಗಳೂರು-1

**ವಿಷಯ:** ವಾರಸುದಾರರಿಲ್ಲದ ಮಾಲುಗಳ ಮಾಲಿಕರ ಪತ್ತೆಗಾಗಿ ಪ್ರಕಟಣೆ.

**ಉಲ್ಲೇಖ:** ಏರ್‌ಪೋರ್ಟ್ ಪೊಲೀಸ್ ಠಾಣೆಯ ಮೊ.ಸಂ.186/04 ಕಲಂ 379 ಐಪಿಸಿ ಹಾಗೂ ಸಿಮಿಸ್ ಸಂಖ್ಯೆ 40/01, 43/01 ಮತ್ತು 558/98.

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖನಕ್ಕೆ ಸಂಬಂಧಿಸಿದಂತೆ ಏರ್‌ಪೋರ್ಟ್ ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದೆ ಅಮಾನತ್ತುಪಡಿಸಿರುವ ಮಾಲುಗಳ ಬಗ್ಗೆ ಕೇಂದ್ರ ಅಪರಾಧ ದಾಖಲಾತಿ ವಿಭಾಗ, ನಗರ ಅಪರಾಧ ದಾಖಲಾತಿ ವಿಭಾಗ ಹಾಗೂ ಬೆಂಗಳೂರು ನಗರದ ಎಲ್ಲಾ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿ ವಾರಸುದಾರರನ್ನು ಪತ್ತೆ ಹಚ್ಚಲು ಏರ್‌ಪೋರ್ಟ್ ಪೊಲೀಸ್ ಠಾಣೆಯ ಠಾಣಾಧಿಕಾರಿಗಳು ಪ್ರಯತ್ನಿಸಿದ್ದು ಆದಾಗ್ಯೂ ಈ ಕೆಳಕಂಡ ವಾಹನಗಳ ವಾರಸುದಾರರು ಪತ್ತೆಯಾಗಿರುವುದಿಲ್ಲ. ಆದುದ್ದರಿಂದ ಈ ಕೆಳಕಂಡ ವಾಹನಗಳ ವಾರಸುದಾರರ ಪತ್ತೆಗಾಗಿ ಮಾಹಿತಿಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಲು ಕೋರಲಾಗಿದೆ.

| ಕ್ರ. ಸಂ. | ಸಿಮೀಸ್ ನಂ. | ಪಿ.ಎಫ್. ನಂ | ವಾಹನದ ಮಾದರಿ ಮತ್ತು ರಿಜಿಸ್ಟ್ರೇಷನ್ ನಂ. | ಚಾರ್ಸಿ ನಂ ಮತ್ತು ಇಂಜಿನ್ ನಂ | ವಾಹನದ ಬಣ್ಣ |
|---|---|---|---|---|---|
| 1 | 40/2001 | 53/01<br>11/05/01 | ಬಜಾಜ್ ಚೇತಕ್ ಸ್ಕೂಟರ್<br>KA 03-E 5420 | 1140659<br>1180951 | |
| 2 | 43/01 | 20/01<br>24/02/01 | ಸುಜೂಕಿ ಸಮುರಾಯಿ<br>CAV - 1813 | 3506 F 005633<br>3506M 012970 | ಕಪ್ಪು |
| 3 | 558/98 | 78/98<br>09/12/98 | ಟಾಟಾ ಟ್ರಕ್ ನಂ<br>AP.11T-6474 | 359320. CVO-<br>708482 | ಕೆಂಪು ಗ್ರೇ |
| 4 | ಮೊ. ಸಂ 186/04<br>ಕಲಂ 379 ಐಪಿಸಿ | 63/04<br>5-9-04 | ಮಾರುತಿ ಓಮ್ನಿ ನಂ<br>KA 15-1745 | COWNK 344612257<br>748641<br>150110 | ಹರಿಸಿನ |

ಮಹಾನಗರ ದಂಡಾಧಿಕಾರಿ,

ಪಿ.ಆರ್. 1714 ಒಂದನೇ ಸಂಚಾರ ನ್ಯಾಯಾಲಯ, ಬೆಂಗಳೂರು-1

## ಶಿಕ್ಷಣ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಇಡಿ 318 ಡಿಪಿಐ 2004, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2006

ಸಾರ್ವಜನಿಕ ಶಿಕ್ಷಣ ಇಲಾಖೆಯ, ಹಿರಿಯ ಸಹಾಯಕ ನಿರ್ದೇಶಕರ (ಬೋಧಕೇತರ) ವೃಂದದ ಅಧಿಕಾರಿಗಳ ದಿನಾಂಕ:1.1.2004 ರಲ್ಲಿದ್ದಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ತಯಾರಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 318 ಡಿಪಿಐ 2004, ದಿನಾಂಕ: 2.9.2004 ರಂದು ಪ್ರಕಟಿಸಲಾಗಿತ್ತು. ಹಾಗೂ ಈ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಬಾಧಿತರಾದ ಅಧಿಕಾರಿಗಳು ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಏನಾದರು ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ, ಬಂದಿರು ಆಕ್ಷೇಪಣೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿದ ಮಾರ್ಗಸೂಚಿಯನ್ವಯ ಕೂಲಂಕುಶವಾಗಿ ಪರಿಶೀಲಿಸಿ ಈ ಆಕ್ಷೇಪಣೆಗಳ ವಾಸ್ತವಾಂಶಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ದೊರೆತ ದಾಖಲೆಗಳ ಆಧಾರದ ಮೇಲೆ ಪರಿಶೀಲಿಸಿ ಸರಿಪಡಿಸಲಾಗಿದೆ.

ಆಕ್ಷೇಪಣೆಗಳನ್ನು ಜಾಗರೂಕತೆಯಿಂದ ಪರಿಶೀಲಿಸಿದ ನಂತರ ಸರ್ಕಾರದ ಇತ್ತೀಚಿನ ಮಾರ್ಗಸೂಚಿಯನ್ವಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕರ (ಬೋಧಕೇತರ) ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ತಯಾರಿಸಿ, ಅನುಬಂಧದಲ್ಲಿರುವಂತೆ ಪ್ರಕಟಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು-1,2)

## ಅನುಬಂಧ

### ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕರ (ಬೋಧಕೇತರ) ವೃಂದದ ಅಂತಿಮ ಜೇಷ್ಠತಾ ಪಟ್ಟಿ ದಿನಾಂಕ: 1.1.2004 ರಲ್ಲಿದ್ದಂತೆ

| ಕ್ರ. ಸಂ. | ಸಹಾಯಕ ನಿರ್ದೇಶಕರ ವೃಂದದ ಜೇ.ಸಂ | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸ್ಥಾನಪನ್ನ ಬಡ್ತಿ ಪಡೆದ ದಿನಾಂಕ | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ / ಸಾಮಾನ್ಯ |
|---|---|---|---|---|---|
| 1. | - | ಕೆ.ಎಂ. ಸುಶೀಲಾ | 25/12/31 | 19/07/89 | - |
| 2. | - | ಬಿ. ಕೃಷ್ಣಾಸಿಂಗ್ | 14/03/33 | 19/07/89 | - |
| 3. | - | ಬಿ.ಟಿ. ಬಂಗಾರಮ್ಮ | 20/12/38 | 19/07/89 | - |
| 4. | - | ಕೆ. ರಾಮಚಂದ್ರಚಾರ್ | 30/08/33 | 19/07/99 | - |
| 5. | 27 | ಹೆಚ್.ಎಸ್. ಸಿದ್ದಯ್ಯ | 20/06/32 | 29/06/90 | ಪ.ಜಾತಿ |
| 6. | 8 | ಕೆ. ಸುಂದರ್ ರಾಜ್ | 08/03/35 | 29/06/90 | - |
| 7. | 20 | ಟಿ.ಎಂ. ಸಿದ್ದಲಿಂಗಪ್ಪ | 21/04/40 | 06/05/96 | ಪ.ಪಂಗಡ |
| 8. | 22 | ಜಬಾಡೆ ಅಣ್ಣಪ್ಪ | 04/05/49 | 06/05/96 | ಪ.ಪಂಗಡ |
| 9. | 25 | ಜಿ.ಎಂ. ಜಯಕುಮಾರ್ | 03/03/39 | 06/05/96 | - |
| 10. | 38 | ಬಿ.ಎನ್. ಶ್ರೀನಿವಾಸಲು | 01/06/38 | 06/05/96 | - |

| ಕ್ರ. ಸಂ. | ಸಹಾಯಕ ನಿರ್ದೇಶಕರ ವೃಂದದ ಜೇ.ಸಂ | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸ್ಥಾನಪನ್ನ ಬಡ್ತಿ ಪಡೆದ ದಿನಾಂಕ | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ / ಸಾಮಾನ್ಯ |
|---|---|---|---|---|---|
| 11. | 41-ಎ | ಎಂ.ಕೆ. ಸುರಪುರ | 01/06/50 | 06/05/96 | ಪ.ಜಾತಿ |
| 12. | 54 | ಎಂ. ವೆಂಕಟರಮಣಪ್ಪ | 30/09/39 | 06/05/96 | ಪ.ಜಾತಿ |
| 13. | 55 | ಟಿ.ವಿ. ಹನುಮಂತಪ್ಪ | 03/02/48 | 16/10/98 | ಪ.ಪಂಗಡ |

**ಸ್ವರ್ಣಲತಾ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2)

ಪಿ.ಆರ್. 1715

## ಶಿಕ್ಷಣ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಇಡಿ 656 ಡಿಪಿಐ 2006, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2006**

ಸಾರ್ವಜನಿಕ ಶಿಕ್ಷಣ ಇಲಾಖೆಯ, ಹಿರಿಯ ಸಹಾಯಕ ನಿರ್ದೇಶಕರು (ಬೋಧಕೇತರ) ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 31.1.2006 ರಲ್ಲಿರುವಂತೆ ತಯಾರಿಸಿ, ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ, ಬಾಧಿತರಾದ ಅಧಿಕಾರಿಗಳು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಸಲಹೆ ಸೂಚನೆಗಳಿದ್ದಲ್ಲಿ ಸಂಬಂಧಿಸಿದ ದಾಖಲೆಗಳೊಂದಿಗೆ, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಿಗೆ ಸಲ್ಲಿಸಿ, ಅದರ ಪ್ರತಿಯನ್ನು ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬಹುಮಹಡಿಗಳ ಕಟ್ಟಡ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು, ಇವರಿಗೆ ಸಲ್ಲಿಸುವಂತೆ ಸೂಚಿಸಿದೆ. ನಿಗದಿತ ಅವಧಿ ಮುಗಿದ ನಂತರ ಬಂದ ಆಕ್ಷೇಪಣೆಗಳು, ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2)

## ಅನುಬಂಧ

**ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕರ (ಬೋಧಕೇತರ) ವೃಂದದ**
**ತಾತ್ಕಾಲಿಕ ಜೇಷ್ಠತಾ ಪಟ್ಟಿ ದಿನಾಂಕ: 31.1.2006 ರಲ್ಲಿದ್ದಂತೆ**

| ಕ್ರ. ಸಂ. | ಸಹಾಯಕ ನಿರ್ದೇಶಕರ ವೃಂದದ ಜೇ.ಸಂ | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸ್ಥಾನಪನ್ನ ಬಡ್ತಿ ಪಡೆದ ದಿನಾಂಕ | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ / ಸಾಮಾನ್ಯ |
|---|---|---|---|---|---|
| 1. | - | ಕೆ.ಎಂ. ಸುಶೀಲಾ | 25/12/31 | 19/07/89 | - |
| 2. | - | ಬಿ. ಕೃಷ್ಣಾಸಿಂಗ್ | 14/03/33 | 19/07/89 | - |
| 3. | - | ಬಿ.ಟಿ. ಬಂಗಾರಮ್ಮ | 20/12/38 | 19/07/89 | - |
| 4. | - | ಕೆ. ರಾಮಚಂದ್ರಚಾರ್ | 30/08/33 | 19/07/99 | - |
| 5. | 27 | ಹೆಚ್.ಎಸ್. ಸಿದ್ದಯ್ಯ | 20/06/32 | 29/06/90 | ಪ.ಜಾತಿ |
| 6. | 8 | ಕೆ. ಸುಂದರ್ ರಾಜ್ | 08/03/35 | 29/06/90 | - |
| 7. | 20 | ಟಿ.ಎಂ. ಸಿದ್ದಲಿಂಗಪ್ಪ | 21/04/40 | 06/05/96 | ಪ.ಪಂಗಡ |
| 8. | 22 | ಜಬಾಡೆ ಅಣ್ಣಪ್ಪ | 04/05/49 | 06/05/96 | ಪ.ಪಂಗಡ |
| 9. | 25 | ಜಿ.ಎಂ. ಜಯಕುಮಾರ್ | 03/03/39 | 06/05/96 | - |
| 10. | 38 | ಬಿ.ಎನ್. ಶ್ರೀನಿವಾಸಲು | 01/06/38 | 06/05/96 | - |
| 11. | 41-ಎ | ಎಂ.ಕೆ. ಸುರಪುರ | 01/06/50 | 06/05/96 | ಪ.ಜಾತಿ |
| 12. | 54 | ಎಂ. ವೆಂಕಟರಮಣಪ್ಪ | 30/09/39 | 06/05/96 | ಪ.ಜಾತಿ |
| 13. | 55 | ಟಿ.ವಿ. ಹನುಮಂತಪ್ಪ | 03/02/48 | 16/10/98 | ಪ.ಪಂಗಡ |
| 14. | 66 | ಸಿ.ಎನ್. ವಿಜಯಕುಮಾರ್ | 26/03/53 | 02/01/2006 | - |
| 15. | 68 | ಕೆ.ಎಲ್. ವೀರಣ್ಣ | 01/03/48 | 02//01/2006 | - |
| 16. | 69 | ಪಿ.ಆರ್. ದೊಡ್ಡಕುರುಬರ್ | 01/06/50 | 02/01/2006 | - |
| 17. | 70 | ಬಿ.ಸಿ. ನೀಲಮ್ಮ | 18/02/49 | 02/01/2006 | - |
| 18. | 71 | ಟಿ.ಸಿ. ವನಜ | 02/02/51 | 02/01/2006 | - |

**ಸ್ವರ್ಣಲತಾ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2)

ಪಿ.ಆರ್. 1716

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್-115/2006 ಎಫ್, ದಿನಾಂಕ: 5ನೇ ಡಿಸೆಂಬರ್ 2006**

**ಅರ್ಜಿದಾರರು:**

ಶ್ರೀ ಬಮ್ಮವಂತಪ್ಪ ಚಂಚಪ್ಪನವರ್, ವಾಸ: ಹೊಸಮನೆ, ನಾಲ್ಕನೆ ತಿರುವು, ಶಿವಮೊಗ್ಗ

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಅಬ್ದುಲ್ ಖಯುವ್ ನಂದಿಹಳ್ಳಿ, ಬಿನ್ ಅಬ್ದುಲ್ ಘನಿ ಸಾಬ್, ಮಾರುತಿ ನಗರ, ರಾಣೆಬೆನ್ನೂರು ಅಂಚೆ ಮತ್ತು ತಾಲ್ಲೂಕು, ಹಾವೇರಿ ಜಿಲ್ಲೆ.
2. ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಮೊದಲನೆ ತಿರುವು, ನೆಹರು ರಸ್ತೆ, ಶಿವಮೊಗ್ಗ.

### ಅಧಿಸೂಚನೆ

ಅರ್ಜಿದಾರನಾದ ಶ್ರೀ ಬಮ್ಮವಂತಪ್ಪ ಚಂಚಪ್ಪನವರ್, ಇವರು ತಮ್ಮ ಮಗನಾದ ಶ್ರೀ ದಿ. ದುರ್ಗಪ್ಪ ಇವರು 1ನೇ ಪ್ರತಿವಾದಿಗಳಾದ ಶ್ರೀ ಅಬ್ದುಲ್ ಖಯುವ್ ನಂದಿಹಳ್ಳಿ, ಬಿನ್ ಅಬ್ದುಲ್ ಘನಿ ಸಾಬ್, ಮಾರುತಿ ನಗರ, ರಾಣೆಬೆನ್ನೂರು ಅಂಚೆ ಮತ್ತು ತಾಲ್ಲೂಕು, ಹಾವೇರಿ ಜಿಲ್ಲೆ, ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 14.09.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1717

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮಂಗಳೂರು ವಿಭಾಗ, ಮಂಗಳೂರು.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು, ಚಂದ್ರಗಿರಿ ಗ್ರಾಮದ ಸರ್ವೆ ನಂ.241/1 (ಹೊಸ ನಂ.506) ರಲ್ಲಿ 2.00 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ಶ್ರೀ ನಾಗರಾಜು ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 334ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರ ಸಂಖ್ಯೆ:ಸಿ.ಐ. 142 ಎಂ.ಎಂ.ಎನ್. 2006 ದಿನಾಂಕ 02.12.2006.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು, ಚಂದ್ರಗಿರಿ ಗ್ರಾಮದ ಸರ್ವೆ ನಂ. 241/1 (ಹೊಸ ನಂ.506) ರಲ್ಲಿ 2.00 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 334ರ ಗುತ್ತಿಗೆಯನ್ನು ಶ್ರೀ ನಾಗರಾಜು ರವರ ಹೆಸರಿನಲ್ಲಿ ದಿನಾಂಕ 22.05.2000 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ 21.02.2005 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53 (2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ ಸಂ:ಗಭೂಇ:ಕಗಗು:334:2006-07/10841 ದಿನಾಂಕ: 8ನೇ ಡಿಸೆಂಬರ್ 2006**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:28.7.2005 ರಲ್ಲಿ ನಿರ್ದೇಶಿಸಿರುವಂತೆ ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು, ಚಂದ್ರಗಿರಿ ಗ್ರಾಮದ ಸರ್ವೆ ನಂ.241/1 (ಹೊಸ ನಂ.506) ರಲ್ಲಿ 2.00 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 334 ರ ಗುತ್ತಿಗೆಯನ್ನು ಶ್ರೀ ನಾಗರಾಜು ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 334ರ ಗುತ್ತಿಗೆಯನ್ನು ಗುತ್ತಿಗೆ ರದ್ದುಗೊಳಿಸಿದ ದಿನಾಂಕ 21.02.2005 ರಿಂದ ಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ನಿರ್ದೇಶಕರು

ಪಿ.ಆರ್. 1718

ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

## ಕಂದಾಯ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಕಂಇ 75 ಎಲ್‌ಆರ್‌ಎಂ 2006, ಬೆಂಗಳೂರು, ದಿನಾಂಕ:5ನೇ ಡಿಸೆಂಬರ್, 2006**

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಎಜುಕೇಷನಲ್ ಸೊಸೈಟಿ (ರಿ) ಧವಳ ನಗರ, ಸತ್ತೂರು, ಧಾರವಾಡ-9 ಇವರು ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕು ಯಾದವಾಡ ಗ್ರಾಮದ ಬ್ಲಾಕ್ ನಂ. 9/5 ರಲ್ಲಿ 03 ಎಕರೆ, 24 ಗುಂಟೆ ಜಮೀನನ್ನು ಶೈಕ್ಷಣಿಕ, ಉದ್ದೇಶಕ್ಕಾಗಿ ಖರೀದಿಸಲು ನಮೂನೆ 15ಎ ಮತ್ತು 15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ರವರು ತಮ್ಮ ಪತ್ರ

ಸಂಖ್ಯೆ:ಕೆಎಲ್‌ಆರ್/ವಿಸಿಆರ್/14/2006-07 ದಿನಾಂಕ: 19.9.2006ರಲ್ಲಿ ಪ್ರಸ್ತಾಪಿತ ಗ್ರಾಮದ ಮೇಲ್ಕಂಡ ಸರ್ವೆ ನಂ.ನಲ್ಲಿ ಒಟ್ಟು 03 ಎಕರೆ 24 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 109 (1) (ii)ರ ಪ್ರಕಾರ ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಸಂಸ್ಥೆಯು ಕರ್ನಾಟಕ ಸೊಸೈಟೀಸ್ ರಿಜಿಸ್ಟ್ರೇಷನ್ ಕಾಯ್ದೆ 1960 ರಡಿ ನೊಂದಾಯಿಸಲ್ಪಟ್ಟಿದೆ. ಅರ್ಜಿದಾರರು ಪ್ರಾಜೆಕ್ಟ್ ವರದಿಯನ್ನು ಸಲ್ಲಿಸಿದ್ದು ಅದು ಅರ್ಜಿದಾರರ ಉದ್ದೇಶಕ್ಕೆ ಪೂರಕವಾಗಿದೆ. ಪ್ರಸ್ತಾಪಿತ ಜಮೀನಿನ ಖಾತೆದಾರರಿಂದ ಜಮೀನನ್ನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿಟಿಸಿಎಲ್ ಕಾಯ್ದೆ 1978) ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಬಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 109 (1) (ii)ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ವರೆಗೆ ಭೂಮಿಯನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109 (1) (ii) ಮತ್ತು ಕರ್ನಾಟಕ ಭೂಸುಧಾರಣೆ ತಿದ್ದುಪಡಿ ನಿಯಮಗಳು 1996ರ ನಿಯಮ 38ಬಿ (2) (ಎ) ಮತ್ತು (ಬಿ)ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಮತ್ತು 80ಕ್ಕೆ ವಿನಾಯಿತಿ ನೀಡಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಎಜುಕೇಷನಲ್ ಸೊಸೈಟಿ, (ರಿ), ಧವಳ ನಗರ, ಸತ್ತೂರು, ಧಾರವಾಡ-9 ಇವರು ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕು ಯಾದವಾಡ ಗ್ರಾಮದ ಬ್ಲಾಕ್ ನಂ. 9/5 ರಲ್ಲಿ 03 ಎಕರೆ, 24 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109 (1)(ii) ರಡಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷದೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇ.51 ಪೇಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಸದರಿ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಓ.ಡಿ.ಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು

4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109(1)ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೋತ್ತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು

6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.

7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನೆ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಜಮೀನನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 1719

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಭೂಸುಧಾರಣೆ)

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003 - Clarification under Section 59(4) regarding rate of tax applicable on "P.V.C.Cables for a voltage of 1100 volts"

**Ref:** Application dated 18.10.2006 of M/s Wire and Insulated Cable Products Pvt. Ltd., No.C-33, Industrial Estate, Rajajinagar, Bangalore-560 044.

In its application cited at reference above, the applicant has sought clarification regarding rate of tax applicable on "P.V.C.Cables for a voltage of 1100 volts".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.172/06-07, Dated: 30th November 2006**

It is hereby clarified that "Electrical Cables for a voltage of 1100 volts" falls under sl.no.52 of the Third Schedule and is taxable at 4% to the Karnataka Value Added Tax Act, 2003.

**B.A. HARISH GOWDA**

P.R. 1721

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003 - Clarification under Section 59(4) regarding rate of tax applicable on "P.V.C. Insulated Cables for a voltage exceeding 1000 volts"

**Ref:** Application dated 25.10.2006 of M/s V-Guard Industries Pvt. Ltd., No.648/B, Binnamangala, Ist Phase, Indiranagar, Ist Stage, Bangalore - 560 038.

In its application cited at reference above, the applicant has sought clarification regarding rate of tax applicable on "P.V.C.Insulated Cables for a voltage exceeding 1000 volts".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.180/06-07, Dated: 30th November 2006**

It is hereby clarified that "Electrical Cables for a voltage exceeding 1000 volts" is taxable at 4% under sl.no.52 of the Third Schedule to the Karnataka Value Added Tax Act, 2003.

**B.A. HARISH GOWDA**

P.R. 1722

Commissioner of Commercial Taxes,
(Karnataka), Bangalore.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ:10/ಡಿಸಿಪಿ/ಸಂ.ಪೂ/2006, ದಿನಾಂಕ: 7ನೇ ಆಗಸ್ಟ್ 2006**

ಬೆಂಗಳೂರು ನಗರ - ಆಡುಗೋಡಿ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಹೆಚ್.ಎಸ್.ಆರ್. ಲೇಔಟ್ 14ನೇ ಮುಖ್ಯರಸ್ತೆ ಮತ್ತು ಹೊರವರ್ತುಲ ರಸ್ತೆ ಜಂಕ್ಷನ್ ಬಳಿ ಚರಂಡಿ ಕಾಮಗಾರಿಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದವರು ತುರ್ತಾಗಿ ಕೈಗೊಳ್ಳುತ್ತಿದ್ದಾರೆ. ಈ ಕಾಮಗಾರಿ

ಕೆಲಸವು ಪೂರ್ಣಗೊಳ್ಳಲು ಸುಮಾರು 2 ತಿಂಗಳ ಕಾಲಾವಧಿ ಹಿಡಿಯುವುದರಿಂದ ಈ ರಸ್ತೆಯಲ್ಲಿನ ವಾಹನ ಸಂಚಾರವನ್ನು ಮಾರ್ಪಾಡುಗೊಳಿಸಿ ಸಾರ್ವಜನಿಕರ ಹಿತದೃಷ್ಟಿಯಿಂದ ಹಾಗೂ ಸುಗಮ ಸಂಚಾರದ ಉದ್ದೇಶದಿಂದ ಸಂಚಾರವನ್ನು ಪರ್ಯಾಯ ರಸ್ತೆ ಮೂಲಕ ಸಂಚರಿಸುವಂತೆ ವ್ಯವಸ್ಥೆ ಮಾಡಿಕೊಡುವುದು ಅಗತ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಸುಗಮ ಸಂಚಾರದ ದೃಷ್ಠಿಯಿಂದ ಪರ್ಯಾಯ ವ್ಯವಸ್ಥೆಯನ್ನು ಕೆಳಕಂಡಂತೆ ಕಲ್ಪಿಸಿ ಆದೇಶಿಸಿರುತ್ತೇನೆ.

1. **ಅಗರ ಕರೆ ರಸ್ತೆ:** ಹೆಚ್.ಎಸ್.ಆರ್. ಲೇಔಟ್ 14ನೇ ಮುಖ್ಯರಸ್ತೆಯಿಂದ ಆಟೋಮ್ಯಾಟ್ ಜಂಕ್ಷನ್‌ವರೆಗೆ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಆಟೋಮಾರ್ಟ್ ಜಂಕ್ಷನ್‌ನಿಂದ ಹೆಚ್.ಎಸ್.ಆರ್. ಲೇಔಟ್ 14ನೇ ಮುಖ್ಯರಸ್ತೆಗೆ ಸಂಚರಿಸುವ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಸಿಲ್ಕ್ ಬೋರ್ಡ್ ಕಡೆಯಿಂದ ಬಂದು ಇಬ್ಬಲೂರು ಜಂಕ್ಷನ್ ಕಡೆಗೆ ಹೋಗುವ ವಾಹನಗಳು, ಹೊರವರ್ತುಲ ರಸ್ತೆಯಲ್ಲಿ ಬಂದು ಹೆಚ್.ಎಸ್.ಆರ್. ಲೇಔಟ್ 14ನೇ ಮುಖ್ಯರಸ್ತೆ ಜಂಕ್ಷನ್ ಬಳಿ ಎಡ ತಿರುವು ಪಡೆದು ಅಗರ ಕೆರೆ ರಸ್ತೆಯಲ್ಲಿ ಚಲಿಸಿ ಆಟೋಮಾರ್ಟ್ ಜಂಕ್ಷನ್‌ನಲ್ಲಿ ಬಲತಿರುವು ಪಡೆದು ಅಗರ ಮತ್ತು ಹೊರ ವರ್ತುಲ ರಸ್ತೆಯನ್ನು ಸೇರಬಹುದು.
2. **ಸರ್ಜಾಪುರ ರಸ್ತೆ:** ಆಟೋಮಾರ್ಟ್ ಜಂಕ್ಷನ್‌ನಿಂದ ಅಗರ ಜಂಕ್ಷನ್‌ವರೆಗೆ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಅಗರ ಜಂಕ್ಷನ್‌ನಿಂದ ಆಟೋಮ್ಯಾಟ್ ಜಂಕ್ಷನ್‌ವರೆಗೆ ಸಂಚರಿಸುವ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಸರ್ಜಾಪುರ ರಸ್ತೆ ಜಕ್ಕ ಸಂದ್ರ ಕಡೆಯಿಂದ ಬಂದು ಹೆಚ್.ಎಸ್.ಆರ್. ಲೇಔಟ್ ಮತ್ತು ಸಿಲ್ಕ್ ಬೋರ್ಡ್ ಕಡೆಗೆ ಹೋಗುವ ವಾಹನಗಳು ಆಟೋಮಾರ್ಟ್ ಜಂಕ್ಷನ್ ಬಳಿ ಬಲತಿರುವು ಪಡೆಯುವುದನ್ನು ನಿಷೇಧಿಸಿ ಈ ಸಂಚಾರವು ನೇರವಾಗಿ ಸರ್ಜಾಪುರ ರಸ್ತೆಯಲ್ಲೇ ಚಲಿಸಿ ಅಗರ ವಿಲೇಜ್ ಜಂಕ್ಷನ್‌ನಲ್ಲಿ ಬಲತಿರುವು ಪಡೆದು ಸಿಲ್ಕ್ ಬೋರ್ಡ್ ಮತ್ತು ಹೆಚ್.ಎಸ್.ಆರ್. ಲೇಔಟ್ ಕಡೆಗೆ ಹೋಗಬಹುದು.
3. **ಹೊರ ವರ್ತುಲ ರಸ್ತೆ:** ಅಗರ ಜಂಕ್ಷನ್‌ನಿಂದ ಹೆಚ್.ಎಸ್.ಆರ್. ಲೇಔಟ್ 14ನೇ ಮುಖ್ಯರಸ್ತೆ ಜಂಕ್ಷನ್‌ವರೆಗೆ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ 14ನೇ ಮೈನ್ ಜಂಕ್ಷನ್‌ನಿಂದ ಅಗರ ಜಂಕ್ಷನ್‌ವರೆಗೆ ಸಂಚರಿಸುವ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಇಬ್ಬಲೂರು ಜಂಕ್ಷನ್ ಕಡೆಯಿಂದ ಬಂದು ಸರ್ಜಾಪುರ ರಸ್ತೆ 1ನೇ ಬ್ಲಾಕ್ ಕೋರಮಂಗಲ ಕಡೆಗೆ ಬರುವ ವಾಹನಗಳು ಅಗರ ಜಂಕ್ಷನ್‌ನಲ್ಲಿ ಬಲತಿರುವು ಪಡೆಯುವುದನ್ನು ನಿಷೇಧಿಸಿ ಈ ಸಂಚಾರವು ನೇರವಾಗಿ ಹೊರ ವರ್ತುಲ ರಸ್ತೆಯಲ್ಲಿ ಚಲಿಸಿ ಹೆಚ್.ಎಸ್.ಆರ್. ಲೇಔಟ್ 14ನೇ ಮುಖ್ಯರಸ್ತೆ ಜಂಕ್ಷನ್ ಬಳಿ ಬಲತಿರುವು ಪಡೆದು ಅಗರ ಕೆರೆ ರಸ್ತೆಯಲ್ಲಿ ಚಲಿಸಿ ಆಟೋಮ್ಯಾಟ್ ಜಂಕ್ಷನ್‌ನಲ್ಲಿ ಎಡತಿರುವು ಪಡೆದು ಸರ್ಜಾಪುರ ರಸ್ತೆ 1ನೇ ಬ್ಲಾಕ್ ಕೋರಮಂಗಲ ಕಡೆಗೆ ಹೋಗಬಹುದು.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 17.8.2006 ರಿಂದ ಕಾಮಗಾರಿ ಪೂರ್ಣಗೊಳ್ಳುವವರೆಗೆ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 7.8.2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1724 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಅಧಿಸೂಚನೆ ಸಂಖ್ಯೆ.13/ಡಿಸಿಪಿ/ಸಂ.ಪೂ/2006 ದಿನಾಂಕ: 31ನೇ ಅಕ್ಟೋಬರ್, 2006.**

ಬೆಂಗಳೂರು ನಗರ – ಶಿವಾಜಿನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿನ ಡಿಕನ್‌ಸನ್ ರಸ್ತೆಯು ಕಾಮರಾಜ ರಸ್ತೆ–ಡಿಸ್ಪೆನ್ಸರಿ ರಸ್ತೆ ಜಂಕ್ಷನ್‌ನಿಂದ ಪ್ರಾರಂಭಗೊಂಡು ಹಲಸೂರು ರಸ್ತೆ – ಡಿಕನ್‌ಸನ್ ರಸ್ತೆ ಜಂಕ್ಷನ್‌ವರೆಗೆ ಕೊನೆಗೊಳ್ಳುತ್ತದೆ. ಡಿಕನ್‌ಸನ್ ರಸ್ತೆ ಒಳಗೊಂಡಂತೆ ಸುತ್ತಮುತ್ತಲಿನ ರಸ್ತೆಗಳಲ್ಲಿ ಇತ್ತೀಚಿನ ದಿನಗಳಲ್ಲಿ ಕೆಲವು ಸಂಚಾರ ಮಾರ್ಪಾಡುಗಳನ್ನು ಮಾಡಿ ಜಾರಿಗೆ ತಂದ ಪ್ರಯುಕ್ತ ದ್ವಿಮುಖ ಸಂಚಾರ ವ್ಯವಸ್ಥೆ ಇರುವ ಡಿಕನ್‌ಸನ್ ರಸ್ತೆಯಲ್ಲಿ ವಾಹನ ಸಂಚಾರ ದಟ್ಟಣೆ ಅಧಿಕಗೊಂಡಿರುತ್ತೆ. ಡಿಕನ್‌ಸನ್ ರಸ್ತೆಯಲ್ಲಿ ಹಸನತ್ ಮಹಿಳಾ ಕಾಲೇಜ್ ಮತ್ತು ಇನ್ನಿತರೆ ಖಾಸಗಿ ಕಂಪನಿಗಳು ಮತ್ತು ಸಂಸ್ಥೆಗಳು ಇರುತ್ತವೆ. ಹಸನತ್ ಮಹಿಳಾ ಕಾಲೇಜ್‌ನಿಂದ ಹಲಸೂರು ರಸ್ತೆ–ಡಿಕನ್‌ಸನ್ ರಸ್ತೆವರೆಗಿನ ಭಾಗದ ರಸ್ತೆಯಲ್ಲಿ ವಾಹನಗಳು ನಿಲುಗಡೆಗೊಳ್ಳುತ್ತಿರುವುದರಿಂದ ಈ ಭಾಗದ ರಸ್ತೆಯಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗಿ ಸಂಚಾರ ಸ್ಥಗಿತಗೊಳ್ಳುತ್ತಿದ್ದು ಇದರ ಪರಿಣಾಮ ಎಂ.ಜಿ ರಸ್ತೆ, ಕಬ್ಬನ್ ರಸ್ತೆ, ಹಲಸೂರು ರಸ್ತೆಗಳಿಗೂ ತಾಗಿ ಸುಗಮ ಸಂಚಾರಕ್ಕೆ ಹೆಚ್ಚಿನ ರೀತಿಯಲ್ಲಿ ತೊಂದರೆಯಾಗುತ್ತಿದೆ. ಅದರಲ್ಲೂ ಹಲಸೂರು ರಸ್ತೆ–ಡಿಕನ್‌ಸನ್ ರಸ್ತೆ ಜಂಕ್ಷನ್‌ನಲ್ಲಿ ಪದೇ ಪದೇ ಬಹಳಷ್ಟು ಸಮಯ ಸಂಚಾರ ಸ್ಥಗಿತಗೊಳ್ಳುವುದರ ಜೊತೆಗೆ ಡಿಕನ್‌ಸನ್ ರಸ್ತೆ, ಕಬ್ಬನ್ ರಸ್ತೆ ಮತ್ತು ಹಲಸೂರು ರಸ್ತೆಗಳ ಉದ್ದಕ್ಕೂ ವಾಹನಗಳು ನಿಲುಗಡೆಗೊಂಡು ಇದನ್ನು ತಿಳಿಗೊಳಿಸಲು ಸಂಚಾರ ಪೊಲೀಸರು ಹರಸಾಹಸ ಪಡಬೇಕಾಗಿದೆ. ಪ್ರಯುಕ್ತ ಡಿಕನ್‌ಸನ್ ರಸ್ತೆಯಲ್ಲಿ ಹಲಸೂರು ರಸ್ತೆ–ಡಿಕನ್‌ಸನ್ ರಸ್ತೆ ಜಂಕ್ಷನ್‌ನಿಂದ ಹಸನತ್ ಮಹಿಳಾ ಕಾಲೇಜ್‌ವರೆಗಿನ ಭಾಗದ ಡಿಕನ್‌ಸನ್ ರಸ್ತೆಯ ಎರಡೂ ಕಡೆಗಳಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಿ ಸಾರ್ವಜನಿಕ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಡಿಕನ್‌ಸನ್ ರಸ್ತೆಯಲ್ಲಿ ವಾಹನ ನಿಲುಗಡೆ ನಿಷೇಧ ಸಂಬಂಧ ಕೆಳಕಂಡಂತೆ ಆದೇಶಿಸಿರುತ್ತೇನೆ.

**ಡಿಕನ್‌ಸನ್ ರಸ್ತೆ:–** ಡಿಕನ್‌ಸನ್ ರಸ್ತೆಯಲ್ಲಿ ಹಲಸೂರು ರಸ್ತೆ–ಡಿಕನ್‌ಸನ್ ರಸ್ತೆ ಜಂಕ್ಷನ್‌ನಿಂದ ಹಸನತ್ ಮಹಿಳಾ ಕಾಲೇಜ್‌ವರೆಗಿನ ಭಾಗದ ಡಿಕನ್‌ಸನ್ ರಸ್ತೆಯ ಎರಡೂ ಕಡೆಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 31–10–2006 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 31–10–2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1725 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಅಧಿಸೂಚನೆ ಸಂಖ್ಯೆ.14/ಸಂವಿ/ಸಿ.ಓ.ಪಿ/2006. ದಿನಾಂಕ: 29ನೇ ಸೆಪ್ಟೆಂಬರ್, 2006.**

ಬೆಂಗಳೂರು ನಗರ, ಬಾಣಸವಾಡಿ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಗೆ ಬರುವ ಹೆಣ್ಣೂರು ಮುಖ್ಯ ರಸ್ತೆಯಲ್ಲಿ ಅಂದರೆ ಲಿಂಗರಾಜಪುರ ರೈಲ್ವೆ ಕ್ರಾಸಿಂಗ್‌ನಿಂದ ಚಂದ್ರಿಕಾ ಸೋಪ್ ಫ್ಯಾಕ್ಟರಿ ಜಂಕ್ಷನ್‌ವರೆಗೆ ಮತ್ತು ಆಯಿಲ್ ಮಿಲ್ ರಸ್ತೆ ಜಂಕ್ಷನ್‌ನಿಂದ ರೈಲ್ವೆ ಕ್ರಾಸಿಂಗ್ ವರೆಗೆ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಕಂಡು ಬಂದಿರುತ್ತದೆ. ಸಾರ್ವಜನಿಕ ಹಿತಾಸಕ್ತಿ ಮೇರೆಗೆ ಈ ರಸ್ತೆಯಲ್ಲಿ ವಾಹನ ದಟ್ಟಣೆಯನ್ನು ತಗ್ಗಿಸಲು ಹಾಗೂ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಸಲುವಾಗಿ ರಸ್ತೆಯಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಎನ್. ಅಚ್ಚುತರಾವ್, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಭಾರತೀಯ ಮೋಟಾರ್ ವಾಹನ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ವಾಹನ ನಿಲುಗಡೆಯನ್ನು ನಿರ್ಬಂಧಿಸಿ ಆದೇಶಿಸಿದ್ದೇನೆ.

**ಹೆಣ್ಣೂರು ಮುಖ್ಯರಸ್ತೆ:** ಈ ರಸ್ತೆಯಲ್ಲಿ ಲಿಂಗರಾಜಪುರ ರೈಲ್ವೆ ಕ್ರಾಸಿಂಗ್‌ನಿಂದ ಚಂದ್ರಿಕಾ ಸೋಪ್ ಫ್ಯಾಕ್ಟರಿ ಜಂಕ್ಷನ್‌ವರೆಗೆ ರಸ್ತೆಯ ಪಶ್ಚಿಮದ ಕಡೆಗೆ ಮತ್ತು ಆಯಿಲ್ ಮಿಲ್ ರಸ್ತೆ ಜಂಕ್ಷನ್‌ನಿಂದ ಕರಿಯನಪಾಳ್ಯ ಬಸ್ ನಿಲ್ದಾಣದವರೆಗೆ ಹಾಗೂ ಕರಿಯನಪಾಳ್ಯ ಬಸ್ ನಿಲ್ದಾಣದಿಂದ ರೈಲ್ವೆ ಕ್ರಾಸಿಂಗ್‌ವರೆಗೆ ರಸ್ತೆಯ ಪೂರ್ವದ ಕಡೆಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ.

ಈ ವಾಹನ ನಿಲುಗಡೆಯನ್ನು ಸೋಪ್ ಫ್ಯಾಕ್ಟರಿ ಜಂಕ್ಷನ್‌ನಿಂದ ಆಯಿಲ್ ಮಿಲ್ ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಪೂರ್ವದ ಕಡೆಗೆ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 30–09–2006 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 29–09–2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಚುತರಾವ್**

ಪಿ.ಆರ್. 1726 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಅಧಿಸೂಚನೆ ಸಂಖ್ಯೆ.15/ಡಿಸಿಪಿ/ಸಂ.ಪೂ/2006 ದಿನಾಂಕ: 3ನೇ ನವೆಂಬರ್ 2006**

ಬೆಂಗಳೂರು ನಗರ – ಆಡುಗೋಡಿ ಸಂಚಾರ ಉಪ ವಿಭಾಗ ವ್ಯಾಪ್ತಿಯಲ್ಲಿನ ಬೆಂಗಳೂರು ಡೈರಿ ವೃತ್ತದಿಂದ ಮೀನಾಕ್ಷಿ ದೇವಸ್ಥಾನ ಜಂಕ್ಷನ್‌ವರೆಗಿನ ಬನ್ನೇರುಘಟ್ಟ ಮುಖ್ಯ ರಸ್ತೆಯಲ್ಲಿ ರಸ್ತೆಯ ಎರಡೂ ಭಾಗಗಳಲ್ಲಿ ವಾಣಿಜ್ಯ ಮಳಿಗೆಗಳು, ಹೋಟೆಲ್‌ಗಳು ಮತ್ತು ವಸತಿ ಗೃಹಗಳು ಇರುತ್ತವೆ. ಬೆಂಗಳೂರು ಡೈರಿ ವೃತ್ತದಲ್ಲಿನ ಮೇಲು ಸೇತುವೆಯು ಸಾರ್ವಜನಿಕ ಉಪಯೋಗಕ್ಕೆ ಲಭ್ಯವಾದ ನಂತರ ವಾಹನ ಸಂಚಾರ ದಟ್ಟಣೆಯು ಅಧಿಕಗೊಂಡಿರುತ್ತದೆ. ರಸ್ತೆಯ ಎರಡೂ ಭಾಗಗಳಲ್ಲಿ ವಾಹನಗಳು ಅಡ್ಡಾದಿಡ್ಡಿಯಾಗಿ ನಿಲುಗಡೆಯಾಗುವುದರಿಂದ ಇತರೆ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿದ್ದು ಆಗಾಗ್ಗೆ ಸಂಚಾರ ಸ್ಥಗಿತಗೊಂಡು ತಹಬಂದಿಗೆ ತರುವುದು ಕಷ್ಟಸಾಧ್ಯವಾಗುತ್ತಿದೆ. ಹಾಗೂ ರಸ್ತೆಯ ಎರಡೂ ಕಡೆಗಳಲ್ಲಿ ವಾಹನಗಳ ನಿಲುಗಡೆಯಿಂದಾಗಿ ಅಪಘಾತಗಳು ಸಂಭವಿಸುತ್ತಿರುವ ಪ್ರಯುಕ್ತ ಬೆಂಗಳೂರು ಡೈರಿ ವೃತ್ತದಿಂದ ಮೀನಾಕ್ಷಿ ದೇವಸ್ಥಾನ ಜಂಕ್ಷನ್‌ವರೆವಿಗೆ ವಾಹನ ನಿಲುಗಡೆಯನ್ನು ನಿಷೇಧಿಸಿ ಸಾರ್ವಜನಿಕ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವಾಹನ ನಿಲುಗಡೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

"ಬೆಂಗಳೂರು ಡೈರಿ ವೃತ್ತದಿಂದ ಮೀನಾಕ್ಷಿ ದೇವಸ್ಥಾನ ಜಂಕ್ಷನ್‌ವರೆಗಿನ ಬನ್ನೇರುಘಟ್ಟ ಮುಖ್ಯ ರಸ್ತೆಯಲ್ಲಿ ರಸ್ತೆಯ ಎರಡೂ ಭಾಗಗಳಲ್ಲಿ ದಿನದ 24 ಗಂಟೆಗಳ ಕಾಲ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ."

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 5–11–2006 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 3–11–2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1727 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಅಧಿಸೂಚನೆ ಸಂಖ್ಯೆ.17/ಡಿಸಿಪಿ/ಸಂ.ಪೂ/2006 ದಿನಾಂಕ: 27ನೇ ನವೆಂಬರ್, 2006.**

ಬೆಂಗಳೂರು ನಗರ – ವಿಮಾನ ನಿಲ್ದಾಣ ಸಂಚಾರ ಪೊಲೀಸ್ ಠಾಣೆ ಸರಹದ್ದಿಗೆ ಸೇರಿರುವ ವರ್ತೂರು ರಸ್ತೆ (ಮಾರತ್‌ಹಳ್ಳಿ) ಒಂದು ಪ್ರಮುಖ ರಸ್ತೆಯಾಗಿದ್ದು ಈ ರಸ್ತೆಯ ಎರಡೂ ಬದಿಯಲ್ಲಿ ವಾಣಿಜ್ಯ ಸಂಕೀರ್ಣಗಳು, ವಸತಿ ಸಂಕೀರ್ಣಗಳು ಹೊಸದಾಗಿ ನಿರ್ಮಾಣವಾಗಿದ್ದು ಹೆಚ್ಚಿನ ವಾಹನ ಸಂಚಾರವಿರುತ್ತದೆ. ಈ ರಸ್ತೆಯ ಮಾರ್ಗದಲ್ಲಿ ಐ.ಟಿ.ಪಿ.ಎಲ್, ವೈಟ್‌ಫೀಲ್ಡ್ ಹಾಗೂ ಹಲವಾರು ಬಹು ರಾಷ್ಟ್ರೀಯ ಮಾಹಿತಿ ಮತ್ತು ತಂತ್ರಜ್ಞಾನ ಕಂಪನಿಗಳಿಗೆ ಹೋಗುವ ಅಧಿಕಾರಿಗಳು ಮತ್ತು ಸಿಬ್ಬಂದಿಯವರ ವಾಹನಗಳು ದಿನೇ ದಿನೇ ಹೆಚ್ಚುತ್ತಿದ್ದು ರಸ್ತೆಯ ಎರಡೂ ಬದಿಯಿಂದಲೂ ವಾಹನ ದಟ್ಟಣೆ ಅಧಿಕವಾಗಿರುತ್ತೆ. ವರ್ತೂರು ರಸ್ತೆಯ (ಮಾರತ್‌ಹಳ್ಳಿ) ದೊಡ್ಡನೆಕ್ಕುಂದಿ ಜಂಕ್ಷನ್‌ನಿಂದ ಕುಂದಲಹಳ್ಳಿ ಜಂಕ್ಷನ್‌ವರೆಗೆ ವಾಹನ ಚಾಲಕರು ಮತ್ತು ಸವಾರರು ವಾಹನಗಳನ್ನು ರಸ್ತೆಯ ಮೇಲೆ ಅಡ್ಡಾದಿಡ್ಡಿಯಾಗಿ ನಿಲುಗಡೆ ಮಾಡುತ್ತಿರುವುದರಿಂದ ಈ ಭಾಗದ ರಸ್ತೆಯಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗಿ ಸಂಚಾರ ಸ್ಥಗಿತಗೊಳ್ಳುತ್ತಿದೆ. ಇದರ ಪರಿಣಾಮ ರಸ್ತೆಯ ಉದ್ದಕ್ಕೂ ವಾಹನಗಳು ನಿಲುಗಡೆಗೊಂಡು ಇದನ್ನು ತಿಳಿಗೊಳಿಸಲು ಸಂಚಾರ ಪೊಲೀಸರು ಹರಸಾಹಸ ಪಡಬೇಕಾಗಿದೆ. ಪ್ರಯುಕ್ತ ವರ್ತೂರು ಮುಖ್ಯ ರಸ್ತೆಯಲ್ಲಿ (ಮಾರತ್‌ಹಳ್ಳಿ) ದೊಡ್ಡನೆಕ್ಕುಂದಿ ಕ್ರಾಸ್‌ನಿಂದ ಕುಂದಲಹಳ್ಳಿ ಜಂಕ್ಷನ್‌ವರೆಗೆ ರಸ್ತೆಯ ಎರಡೂ ಕಡೆಗಳಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಿ ಸಾರ್ವಜನಿಕ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ವರ್ತೂರು ರಸ್ತೆಯಲ್ಲಿ ವಾಹನ ನಿಲುಗಡೆ ನಿಷೇಧ ಸಂಬಂಧ ಕೆಳಕಂಡಂತೆ ಆದೇಶಿಸಿರುತ್ತೇನೆ.

"ವರ್ತೂರು ರಸ್ತೆಯಲ್ಲಿ (ಮಾರತ್‌ಹಳ್ಳಿ) ರಸ್ತೆಯ ಪಶ್ಚಿಮ ದಿಕ್ಕಿನ ದೊಡ್ಡನೆಕ್ಕುಂದಿ ಜಂಕ್ಷನ್‌ನಿಂದ ಪೂರ್ವ ದಿಕ್ಕಿನ ಕುಂದಲಹಳ್ಳಿ ಜಂಕ್ಷನ್‌ವರೆಗೆ ರಸ್ತೆಯ ಎರಡೂ ಕಡೆಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ"

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 30–11–2006 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 27–11–2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1728 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ,**

**ಅಧಿಸೂಚನೆ ಸಂಖ್ಯೆ.31/ಡಿಸಿಪಿ/ಸಂ.ಪೂ/2005, ದಿನಾಂಕ: 21ನೇ ನವೆಂಬರ್, 2006**

ಬೆಂಗಳೂರು ನಗರ ಸೆಂಟ್‌ಮಾರ್ಕ್ಸ್ ರಸ್ತೆ, ಮ್ಯೂಸಿಯಂ ರಸ್ತೆ, ಮದ್ರಾಸ್ ಬ್ಯಾಂಕ್ ರಸ್ತೆ, ಮತ್ತು ಲೇವೆಲ್ಲಿ ರಸ್ತೆಗಳಲ್ಲಿ ಸುಗಮ ಸಂಚಾರದ ದೃಷ್ಠಿಯಿಂದ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ನಿರ್ಬಂಧಿಸಿ ಏಕಮುಖ ಸಂಚಾರ ವ್ಯವಸ್ಥೆ ಹಾಗೂ ಇನ್ನಿತರೆ ಸಂಚಾರ ಮಾರ್ಪಾಡುಗಳನ್ನು ಪ್ರಾಯೋಗಿಕವಾಗಿ ಜಾರಿಯಲ್ಲಿರುವಂತೆ ದಿನಾಂಕ: 15–12–2005 ರಂದು ಆದೇಶ ಹೊರಡಿಸಲಾಗಿತ್ತು.

ಬೆಂಗಳೂರು ನಗರದ ಮೇಲ್ಕಂಡ ರಸ್ತೆಗಳಲ್ಲಿ ಹೆಚ್ಚಿನ ಸಂಚಾರ ಒತ್ತಡವಿದ್ದು ಆಗಿಂದಾಗ್ಗೆ ಸಂಭವಿಸುತ್ತಿದ್ದ ಸಂಚಾರ ಸ್ಥಗಿತ ಹಾಗೂ ಅಪಘಾತಗಳಿಂದ ವಾಹನ ಚಾಲಕರಿಗೆ ಅನಾನುಕೂಲವಾಗಿ ಕಂಡಿದ್ದು ತುರ್ತಾಗಿ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಹಾಗೂ ವಾಹನಗಳ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಸಾರ್ವಜನಿಕ ಹಿತಾಸಕ್ತಿ ಗಮನಿಸಿ ತಾತ್ಕಾಲಿಕವಾಗಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸಿ ಹಾಗೂ ಇತರೆ ಸಂಚಾರ ಮಾರ್ಪಾಡುಗಳನ್ನು ಮಾಡಿ ಜಾರಿಗೆ ತಂದ ಬಳಿಕ ಸಂಚಾರವು ಸುಗಮವಾಗಿ ಸಾಗುತ್ತಿರುವುದು ಕಂಡುಬಂದಿದ್ದು, ಇದರ ಬಗ್ಗೆ ತಜ್ಞರ ಹಾಗೂ ವಿವಿಧ ಸಂಸ್ಥೆಗಳ ಅಭಿಪ್ರಾಯವನ್ನು ಪಡೆದು ವಾಹನ ಸಂಚಾರ ದಟ್ಟಣೆಯನ್ನು ಕಡಿಮೆಗೊಳಿಸಲು ಹಾಗೂ ಸುಗಮ ಸಂಚಾರಕ್ಕಾಗಿ, ಅಪಘಾತಗಳನ್ನು ನಿಯಂತ್ರಿಸುವ ಸಲುವಾಗಿ ಈ ಮೇಲ್ಕಂಡ ರಸ್ತೆಗಳಲ್ಲಿನ ಸಂಚಾರ ನಿರ್ಬಂಧವನ್ನು ಪ್ರಾಯೋಗಿಕವಾಗಿ ನಡೆಸಿದ್ದು ಅದನ್ನು ಖಾಯಂ ಆಗಿ ಮುಂದುವರಿಸುವುದು ಅವಶ್ಯಕವಾಗಿ ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

1. **ಮ್ಯೂಸಿಯಂ ರಸ್ತೆ:–** ಮ್ಯೂಸಿಯಂ ರಸ್ತೆಯು ಸೆಂಟ್‌ಮಾರ್ಕ್ ರಸ್ತೆಯ ಎಸ್.ಬಿ.ಐ ಜಂಕ್ಷನ್‌ನಿಂದ ಪ್ರಾರಂಭಗೊಂಡು ಆಶೀರ್ವಾದಂ ಜಂಕ್ಷನ್ ಮೂಲಕ ಹಾಯ್ದು ಶೂಲೆ ಜಂಕ್ಷನ್ (ಅಶೋಕನಗರ ಹಳೇ ಪೊಲೀಸ್ ಸ್ಟೇಷನ್ ವೃತ್ತ) ನಲ್ಲಿ ಕೊನೆಗೊಳ್ಳುತ್ತದೆ. ಈ ರಸ್ತೆಯು ಏಕಮುಖ ಸಂಚಾರ ರಸ್ತೆಯಾಗಿರುತ್ತೆ. ಈ ರಸ್ತೆಯಲ್ಲಿ ಎಸ್.ಬಿ.ಐ ಜಂಕ್ಷನ್‌ನಿಂದ ಆಶೀರ್ವಾದಂ ಸರ್ಕಲ್‌ವರೆಗೆ ಉತ್ತರದಿಂದ ದಕ್ಷಿಣಕ್ಕೆ ಏಕಮುಖ ವಾಹನ ಸಂಚಾರವಿದ್ದು ಈ ಸಂಚಾರವನ್ನು ನಿರ್ಬಂಧಿಸಿ ವಿರುದ್ಧ ದಿಕ್ಕಿನ ಸಂಚಾರಕ್ಕೆ ಅಂದರೆ ಆಶೀರ್ವಾದಂ ಸರ್ಕಲ್‌ನಿಂದ ಎಸ್.ಬಿ.ಐ ಜಂಕ್ಷನ್ ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಂಚರಿಸಲು ಅವಕಾಶ ಕಲ್ಪಿಸಿದೆ.

2. **ಸೆಂಟ್‌ಮಾರ್ಕ್ಸ್ ರಸ್ತೆ:–** ಈ ರಸ್ತೆಯಲ್ಲಿ ಕ್ಯಾಷ್‌ಫಾರ್ಮಸಿ ಜಂಕ್ಷನ್‌ನಿಂದ ಎಸ್.ಬಿ.ಐ ಜಂಕ್ಷನ್‌ವರೆಗೆ ಜಾರಿಯಲ್ಲಿರುವ ಏಕಮುಖ ಸಂಚಾರ ವ್ಯವಸ್ಥೆಯಲ್ಲಿನ ದಿಕ್ಕನ್ನು ಅದಲು ಬದಲು ಮಾಡಿ ಅಂದರೆ ಕ್ಯಾಷ್‌ಫಾರ್ಮಸಿ ಜಂಕ್ಷನ್‌ನಿಂದ ಎಸ್.ಬಿ.ಐ ಜಂಕ್ಷನ್ ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಂಚರಿಸುವ ಸಂಚಾರವನ್ನು ನಿರ್ಬಂಧಿಸಿ ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಎಸ್.ಬಿ.ಐ ಜಂಕ್ಷನ್‌ನಿಂದ ಕ್ಯಾಷ್‌ಫಾರ್ಮಸಿ ಜಂಕ್ಷನ್ ವರೆಗೆ ಉತ್ತರದಿಂದ ದಕ್ಷಿಣಕ್ಕೆ ಸಂಚರಿಸಲು ಅವಕಾಶ ಕಲ್ಪಿಸಿದೆ.

   ಇದೇ ಸೆಂಟ್ ಮಾರ್ಕ್ಸ್ ರಸ್ತೆಯಲ್ಲಿ ಎಸ್.ಬಿ.ಐ ಜಂಕ್ಷನ್‌ನಿಂದ ಅನಿಲ್‌ಕುಂಬ್ಳೆ ವೃತ್ತದವರೆಗೆ ದ್ವಿಮುಖ ಸಂಚಾರವಿದ್ದು, ಈ ಸಂಚಾರದಲ್ಲಿ ಎಸ್.ಬಿ.ಐ ಜಂಕ್ಷನ್‌ನಿಂದ ಅನಿಲ್‌ಕುಂಬ್ಳೆ ವೃತ್ತದವರೆಗೆ ದಕ್ಷಿಣದಿಂದ ಉತ್ತರಕ್ಕೆ ಚಲಿಸುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಅನಿಲ್‌ಕುಂಬ್ಳೆ ವೃತ್ತದಿಂದ ಎಸ್.ಬಿ.ಐ ಜಂಕ್ಷನ್‌ವರೆಗೆ ಉತ್ತರದಿಂದ ದಕ್ಷಿಣದ ಕಡೆಗೆ ಚಲಿಸುವ ಸಂಚಾರವನ್ನು ನಿಷೇಧಿಸಿದೆ.

3. **ಮದ್ರಾಸ್ ಬ್ಯಾಂಕ್ ರಸ್ತೆ :–** ಈ ರಸ್ತೆಯು ಲೇವೆಲ್ಲಿ ರಸ್ತೆಯಿಂದ ಪ್ರಾರಂಭಗೊಂಡು ಸೆಂಟ್ ಮಾರ್ಕ್ಸ್ ರಸ್ತೆಯ ಎಸ್.ಬಿ.ಐ ಜಂಕ್ಷನ್‌ನಲ್ಲಿ ಕೊನೆಗೊಳ್ಳುತ್ತದೆ. ಈ ರಸ್ತೆಯಲ್ಲಿ ದ್ವಿಮುಖ ಸಂಚಾರವಿದ್ದು ಈ ಸಂಚಾರದಲ್ಲಿ ಲೇವೆಲ್ಲಿ ರಸ್ತೆ–ಮದ್ರಾಸ್ ಬ್ಯಾಂಕ್ ರಸ್ತೆ ಜಂಕ್ಷನ್‌ನಿಂದ ಎಸ್.ಬಿ.ಐ ಜಂಕ್ಷನ್‌ವರೆಗಿನ ಪಶ್ಚಿಮದಿಂದ ಪೂರ್ವಕ್ಕೆ ಚಲಿಸುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಎಸ್.ಬಿ.ಐ ಜಂಕ್ಷನ್‌ನಿಂದ ಲೇವೆಲ್ಲಿ ರಸ್ತೆ ಕಡೆಗೆ ಮದ್ರಾಸ್ ಬ್ಯಾಂಕ್ ರಸ್ತೆಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಿದೆ.

4. **ಲೇವೆಲ್ಲಿ ರಸ್ತೆ:–** ಲೇವೆಲ್ಲಿ ರಸ್ತೆಯಲ್ಲಿ ಕೆಥೆಡ್ರಿಲ್ ಚರ್ಚ್ ವೃತ್ತದಿಂದ ಮದ್ರಾಸ್ ಬ್ಯಾಂಕ್ ರಸ್ತೆವರೆಗೆ ಹಾಲಿ ಇರುವ ವಾಹನ ನಿಲುಗಡೆಯನ್ನು ನಿಷೇಧಿಸಿದೆ. ಈ ವಾಹನ ನಿಲುಗಡೆಯನ್ನು ಲೇವೆಲ್ಲಿ ರಸ್ತೆಯಿಂದ ಎಸ್.ಬಿ.ಐ ಜಂಕ್ಷನ್ ಕಡೆಗೆ ಹೋಗುವ ಮದ್ರಾಸ್ ಬ್ಯಾಂಕ್ ರಸ್ತೆಯಲ್ಲಿ ಬಲಗಡೆಗೆ ಸ್ಥಳಾಂತರಿಸಿ ಇಲ್ಲಿ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿದೆ.

   ಲೇವೆಲ್ಲಿ ರಸ್ತೆಯಲ್ಲಿ ಏರ್‌ಲೈನ್ಸ್ ಹೋಟೆಲ್ ಜಂಕ್ಷನ್‌ನಿಂದ ರಿಚ್‌ಮಂಡ್ ವೃತ್ತದವರೆಗೆ ಉತ್ತರದಿಂದ ದಕ್ಷಿಣಕ್ಕೆ ಜಾರಿಯಲ್ಲಿದ್ದಂತ ಏಕ ಮುಖ ಸಂಚಾರ ವ್ಯವಸ್ಥೆಯನ್ನು ರದ್ದುಪಡಿಸಿ ಏರ್‌ಲೈನ್ಸ್ ಹೋಟೆಲ್ ಜಂಕ್ಷನ್‌ನಿಂದ ರಿಚ್‌ಮಂಡ್ ವೃತ್ತದವರೆಗೆ ದ್ವಿಮುಖ ಸಂಚಾರ ವ್ಯವಸ್ಥೆಗೆ ಅನುವು ಮಾಡಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ಖಾಯಂ ಆಗಿ ಮುಂದುವರಿಸಲು ದಿನಾಂಕ: 21–11–2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1729 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**KARNATAKA STATE CONSUMER DISPUTES REDRESSAL COMMISSION**
**BASAVA BHAVAN, HIGH GROUNDS, BANGALORE - 560 001**
**NOTIFICATION No. KSC/ADM/48/2003-04, Dated: 8th December 2006**

**Sub:** Calendar-2007 of Karnataka Consumer Disputes Redressal State Commission.

**Ref:** Calendar-2007 of Hon'ble High Court of Karnataka.

The Karnataka Consumer Disputes Redressal State Commission, Bangalore, adopts to follow the General Holidays and Optional Holidays specified by the Government of Karnataka to be observed by all the Offices of the Government of Karnataka for the year 2007.

Except the days fixed for the hearing of urgent matters, there will be no regular sittings during the period mentioned below:

1. From Monday the 23rd April 2007 to Sunday the 27th May 2007 (bdi)
2. From Monday the 15th October 2007 to Friday the 19th October 2007 (bdi)
3. From Monday the 24th December 2007 to Monday the 31st December 2007 (bdi)

The Office of the Karnataka Consumer Disputes Redressal State Commission will open and working from 10.00 AM to 5.30 PM on all working day of the State Government and the period mentioned above.

All the District Forums in the State of Karnataka will work on all working days of the State Government.

By Order of the Hon'ble President,

**K.L. SHIVALINGE GOWDA**

P.R. 1730 Registrar & Administrative Officer, Karnataka State Consumer Disputes Redressal Commission, Bangalore.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಮಲ್ಲೇಶ್ವರಂ, ಬೆಂಗಳೂರು - 560 003

**ವಿಷಯ:** ದಿ ಜನತಾ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ಇದರ ಅಮಲ್ಜಾರಿ ಸಂಖ್ಯೆ ಜೆ.ಆರ್.ಬಿ/ಡಿ.ಐ.ಎಸ್. 9529/03-04 ಸಿ.ಇ.ಪಿ., ಸಂಖ್ಯೆ:ಯು.ಬಿ.ಎಫ್/174/2004-05 ಶ್ರೀಮತಿ ಸುಷ್ಮತ್ರಲುಜಾರವರ ಸ್ಥಿರಾಸ್ಥಿ ಸಂಖ್ಯೆ 39/1, ಹಳೆ ನಂ. 683, 5ನೇ ಮುಖ್ಯರಸ್ತೆ, ಗೋಕುಲ, ಒಂದನೇ ಹಂತ, ಎರಡನೇ ಘಟ್ಟ, ಬೆಂಗಳೂರು ಈ ಸ್ಥಿರಾಸ್ಥಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ಕಾಯಿದೆ 38(6) (ಎ) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1 ದಾವಾ ಸಂಖ್ಯೆ:ಜೆ.ಆರ್.ಬಿ./ಡಿ.ಐ.ಎಸ್/9529/03-04 ದಿನಾಂಕ:8.2.2005.

2 ಅಮಲ್ಜಾರಿ ಸಂಖ್ಯೆ ಸಿ.ಇ.ಪಿ. ಸಂಖ್ಯೆ/ಯುಬಿಎಫ್/174/2004-05.

3 ಮಾರಾಟಾಧಿಕಾರಿಯವರ ವರದಿ ದಿನಾಂಕ:28.11.2006.

**ಪ್ರಸ್ತಾವನೆ:**

ಶ್ರೀಮತಿ ಸುಷ್ಮಾತ್ರಲುಜಾ ಕೋಂ ಓಂ ಪ್ರಕಾಶ್ ನಂ.683, 5ನೇ ಮುಖ್ಯರಸ್ತೆ, ಗೋಕುಲ ಒಂದನೇ ಹಂತ, ಎರಡನೇ ಘಟ್ಟ, ಬೆಂಗಳೂರು ಇವರು ದಿ ಜನತಾ ಕೋ-ಆಪರೇಟಿವ್ ಬ್ಯಾಂಕ್ ನಿ., ಮಲ್ಲೇಶ್ವರಂ, ಬೆಂಗಳೂರು-560 055 ಈ ಶಾಖೆಯಿಂದ ಸಾಲವನ್ನು ಪಡೆದು ವಾಯಿದೆ ಒಳಗೆ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ್ದರಿಂದ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 70ರ ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು,ಒಂದನೇ ವಲಯ ರವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ ಜೆ.ಆರ್.ಬಿ./ಡಿ.ಐ.ಎಸ್./9529/2003-04 ದಿನಾಂಕ:8.2.2005 ರಂತೆ ದಾವಾ ಹೂಡಿ ಆದೇಶ ಪಡೆದಿದ್ದರೂ ಸಹ ಸಾಲ ವಸೂಲಾತಿ ಬಂದಿರುವುದಿಲ್ಲ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತದವರ ನಾಮಿನಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ವಲಯ-1 ರವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶಾನುಸಾರ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ 1960ರ ನಿಯಮ 34(1) ರನ್ವಯ ಈ ಕಛೇರಿಯಲ್ಲಿ ಅಮಲ್ಜಾರಿ ಸಂಖ್ಯೆ ಸಿ.ಇ.ಪಿ. ಸಂಖ್ಯೆ ಯುಬಿಎಫ್ /174/2004-05 ರಂತೆ ಕ್ರಮ ಕೈಗೊಳ್ಳಲು ದಾಖಲು ಮಾಡಲಾಗಿದೆ. ಸದರಿ ಅಮಲ್ಜಾರಿ ಅರ್ಜಿಯನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮಕೈಗೊಂಡು ಸುಸ್ತಿದಾರರು ಸಾಲಕ್ಕೆ ಆಧಾರ ಮಾಡಿದ ಈ ಕೆಳಗೆ ಕಾಣಿಸಿದ ಸ್ಥಿರಾಸ್ಥಿಯನ್ನು ದಿನಾಂಕ:5.10.2006 ರಂದು ಬಹಿರಂಗ ಹರಾಜಿಗೆ ತಂದಿದ್ದು, ಸದರಿ ಬಹಿರಂಗ ಹರಾಜಿನಲ್ಲಿ 16 ಜನ ಬಿಡ್‌ದಾರರು ಭಾಗವಹಿಸಿದ್ದು ಈ ಪೈಕಿ ಶ್ರೀ ಕೆ. ದೇವದಾಸ್ ಬಿನ್. ಲೇಟ್ ಸಿ.ಕೆ. ಕೃಷ್ಣನ್ ಹಾಗೂ ಶ್ರೀ ಕೆ. ಪ್ರಕಾಶ್ ಬಿನ್ ಲೇಟ್ ಸಿ.ಕೆ. ಕೃಷ್ಣನ್ ನಂ. 694/61/5,6ನೇ ಅಡ್ಡರಸ್ತೆ 6ನೇ ಮುಖ್ಯರಸ್ತೆ, ಗೋಕುಲ ಒಂದನೇ ಹಂತ ಯಶವಂತಪುರ, ಬೆಂಗಳೂರು-560022 ಇವರುಗಳು ಜಂಟಿಯಾಗಿ ರೂ. 35,00,000/- (ಮೂವತ್ತೈದು ಲಕ್ಷ ರೂಪಾಯಿ) ಗಳಿಗೆ ಬಿಡ್ ಮಾಡಿದ್ದು, ಅತೀ ಹೆಚ್ಚಿನ ಬಿಡ್‌ದಾರರಾಗಿರುತ್ತಾರೆ.

ಅಮಲ್ಜಾರಿ ಅರ್ಜಿಯ ಅನ್ವಯ ಅಂದರೆ ರೂ. 10,50,000/- + ಬಡ್ಡಿ + ಇತರೆ ಖರ್ಚು ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ. 35,00,000/- ಅತೀ ಹೆಚ್ಚಿನ ಬಿಡ್‌ದಾರರಾದ ಶ್ರೀ ಕೆ.ದೇವದಾಸ್ ಹಾಗೂ ಶ್ರೀ ಕೆ. ಪ್ರಕಾಶ್‌ರವರು ಬಿಡ್ಡಿನ ಮೊತ್ತದ ಶೇ. 15% ರಂತೆ ರೂ.5,25,000/-ಗಳನ್ನು ದಿನಾಂಕ:5.10.2006 ರಂದು ಸ್ಥಳದಲ್ಲಿ ಬ್ಯಾಂಕಿಗೆ ಪಾವತಿ ಮಾಡಿರುತ್ತಾರೆ. ಹಾಗೂ ದಿನಾಂಕ:18.11.2006 ರಂದು ರೂ.29,75,000/- ಗಳನ್ನು ಪಾವತಿ ಮಾಡಿರುತ್ತಾರೆ. ಹರಾಜಿನ ಪೂರ್ಣ ಹಣವನ್ನು ಆಸ್ತಿ ಖರೀದಿಸಿದ ಶ್ರೀ ದೇವದಾಸ್ .ಕೆ. ಹಾಗೂ ಶ್ರೀ ಕೆ. ಪ್ರಕಾಶ್ ರವರು ನಿಗಧಿತ ಅವಧಿಯೊಳಗೆ ವಾದಿ ಬ್ಯಾಂಕಿಗೆ ಪಾವತಿಸಿರುತ್ತಾರೆ ಎಂದು ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರುರವರಿಗೆ 28.11.2006ರಂದು ಪತ್ರವನ್ನು ನೀಡಿ ವರದಿ ನೀಡಿರುತ್ತಾರೆ. ಪ್ರತಿ ಲಗತ್ತಿಸಲಾಗಿದೆ.

ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ:5.10.2006ರಂದು ಸಹಕಾರ ಸಂಘಗಳ ನಿಯಮಾವಳಿಗಳ ಪ್ರಕಾರ ಹರಾಜು ನಡವಳಿಕೆಯನ್ನು ನಡೆಸಿ ಮಾರಾಟವನ್ನು ಖಾಯಂಗೊಳಿಸಬಹುದೆಂದು ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ಸ್ಥಿರಾಸ್ಥಿ ಹರಾಜಿನಲ್ಲಿ ಒಟ್ಟು 16 ಜನ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಕೆ. ದೇವದಾಸ್ ಬಿನ್ ಲೇಟ್ ಸಿ.ಕೆ. ಕೃಷ್ಣನ್ ಹಾಗೂ ಶ್ರೀ ಕೆ. ಪ್ರಕಾಶ್ ಬಿನ್ ಲೇಟ್ ಸಿ.ಕೆ. ಕೃಷ್ಣನ್ ನಂ. 694/61/5, 6ನೇ ಮುಖ್ಯರಸ್ತೆ, ಗೋಕುಲ 1ನೇ ಹಂತ, ಯಶವಂತಪುರ, ಬೆಂಗಳೂರು-560 022 ಇವರಿಗೆ ರೂ. 35,00,000/-ಕ್ಕೆ ಮಾರಾಟ ಮಾಡಿರುವುದು ವರದಿಯಲ್ಲಿ ದಾಖಲೆಗಳಿಂದ ತಿಳಿಯಬಂದಿರುತ್ತದೆ. ಆಸ್ತಿ ಖರೀದಿಸಿದ ಕೆ. ದೇವದಾಸ್ ಹಾಗೂ ಕೆ. ಪ್ರಕಾಶ್ ರವರು ಹರಾಜಿನ ಪೂರ್ಣ ಹಣವನ್ನು ನಿಗಧಿತ ಅವಧಿ ಒಳಗೆ ವಾದಿ ಬ್ಯಾಂಕಿಗೆ ಪಾವತಿಸಿರುವುದು, ದಾಖಲೆಗಳಿಂದ ದೃಢಪಟ್ಟಿರುವುದರಿಂದ ದಿನಾಂಕ: 5.10.2006 ರಂದು ನಡೆದ ಸ್ಥಿರಾಸ್ಥಿಯ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಿ ಹಾಗೂ ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡುಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

## ಆದೇಶ

### ಕ್ರ.ಸಂ: ಎಆರ್‌ಬಿ 44: ಮಾ.ಸ್ಥಿರೀಕರಣ:02:06-07 ದಿನಾಂಕ: 30ನೇ ನವೆಂಬರ್ 2006

ವಿ. ಗಂಗಾಧರಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಮಲ್ಲೇಶ್ವರಂ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ 1960 ನಿಯಮ 38(6) (ಎ) ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಿ.ಇ.ಪಿ ಸಂಖ್ಯೆ/ಯು.ಬಿ.ಎಫ್/174/04-05 ರಲ್ಲಿ ಶ್ರೀಮತಿ ಸುಷ್ಮತ್ರಲುಜ ಕೋಂ ಓಂ ಪ್ರಕಾಶ್, ಸದಸ್ಯತ್ವದ ಸಂಖ್ಯೆ 20391, ವಿಳಾಸ 39/1, ಹಳೆ ನಂಬರ್ 683, 5ನೇ ಮುಖ್ಯರಸ್ತೆ, ಗೋಕುಲ 1ನೇ ಹಂತ, ಎರಡನೇ ಘಟ್ಟ, ಬೆಂಗಳೂರು ಇವರಿಗೆ ಸೇರಿದ ಸ್ಥಿರಾಸ್ಥಿಯನ್ನು ದಿನಾಂಕ:5.10.2006 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಗಳು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಕೆ. ದೇವದಾಸ್ ಬಿನ್ ಲೇಟ್ ಸಿ.ಕೆ. ಕೃಷ್ಣನ್ ಹಾಗೂ ಕೆ. ಪ್ರಕಾಶ್ ಬಿನ್ ಲೇಟ್ ಸಿ.ಕೆ. ಕೃಷ್ಣನ್ ನಂ.694/61/5, 6ನೇ ಅಡ್ಡರಸ್ತೆ, 6ನೇ ಮುಖ್ಯರಸ್ತೆ, ಗೋಕುಲ, 1ನೇ ಹಂತ, ಯಶವಂತಪುರ, ಬೆಂಗಳೂರು-560022 ಇವರು ಅತೀ ಹೆಚ್ಚಿನ ಬಿಡ್‌ದಾರರಾಗಿ ರೂ 35,00,000/-ಗಳಿಗೆ ಜಂಟಿಯಾಗಿ ಖರೀದಿಸಿದ್ದು, ಈ ಕೆಳಗೆ ವಿವರಿಸಿದ ಸ್ಥಿರಾಸ್ಥಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸುತ್ತೇನೆ.

## ಸ್ಥಿರಾಸ್ಥಿಯ ವಿವರ

ಶ್ರೀಮತಿ ಸುಷ್ಮತಲುಜ ಕೋಂ ಓಂ ಪ್ರಕಾಶ್, ಸದಸ್ಯತ್ವದ ಸಂಖ್ಯೆ 20391, ವಿಳಾಸ 39/1, ಹಳೆ ನಂ, 683, 5ನೇ ಮುಖ್ಯರಸ್ತೆ ಗೋಕುಲ 1ನೇ ಹಂತ, ಎರಡನೇ ಘಟ್ಟ, ಬೆಂಗಳೂರು, ಚೆಕ್ಕುಬಂದಿ ಪೂರ್ವ-ಪಶ್ಚಿಮ:34-0 ಅಡಿಗಳು, ಉತ್ತರ-ದಕ್ಷಿಣ :30-0 ಅಡಿಗಳು, ಅಳತೆಯ ಕಟ್ಟಡ, ಉತ್ತರಕ್ಕೆ ಇತರೆಯವರ ಸ್ವತ್ತು, ದಕ್ಷಿಣಕ್ಕೆ ಇದೆ ನಂಬರ್ ಪೈಕಿ ದಕ್ಷಿಣ ಭಾಗದ ಸ್ವತ್ತು, ಪೂರ್ವಕ್ಕೆ ನರಸಿಂಹಯ್ಯನವರ ಸ್ವತ್ತು, ಪಶ್ಚಿಮಕ್ಕೆ ರಸ್ತೆ, ಈ ಜಾಗದಲ್ಲಿರುವ ನೆಲಮಹಡಿ ಮತ್ತು ಮೊದಲನೆಯ ಮಹಡಿ ಇರುತ್ತದೆ.

ಮಾರಾಟ ಮೊಬಲಗು: ರೂ. 35,00,000/-

ಮಾರಾಟದ ದಿನಾಂಕ: 05.10.2006.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 30.11.2006 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
1ನೇ ವಲಯ, ಮಲ್ಲೇಶ್ವರಂ,
ಬೆಂಗಳೂರು-560003.

ಪಿ.ಆರ್. 1731

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್-116/2006 ಎಫ್, ದಿನಾಂಕ: 7ನೇ ಡಿಸೆಂಬರ್ 2006**

**ಅರ್ಜಿದಾರರು:**

1. ಶ್ರೀಮತಿ ವಿದ್ಯಾವತಿ, ಕೋಂ. ಲೇಟ್ ಚಂದ್ರಶೇಖರ್,
2. ವಿಶ್ರುತ ಬಿನ್: ಲೇಟ್ ಚಂದ್ರಶೇಖರ್,
3. ಶ್ರೀ ಕೆ. ಭರತ, ಬಿನ್: ಲೇಟ್ ಲೋಕಯ್ಯ ಪೂಜಾರಿ,
4. ಶ್ರೀಮತಿ ಪುಷ್ಪಾವತಿ, ಕೋಂ. ಶ್ರೀ ಕೆ. ಭರತ,
5. ಕು. ಇಂದಿರಾ,
6. ಶ್ರೀ ರವಿಕುಮಾರ್, ಬಿನ್: ಶ್ರೀ ಕೆ. ಭರತ,
7. ಶ್ರೀಮತಿ ಕುಸುಮ, ಕೋಂ ಪದ್ಮನಾಭ, ವಾಸ: ಗುಟ್ಟಿಗೆ ಕಂಪೌಂಡ್, ದೇರೆಬೈಲು, ಕೊಂಚಾಡಿ, ಮಂಗಳೂರು.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಸುರೇಶ್, ಬಿನ್: ರಾಮಯ್ಯ, ದೇವಾಡಿಗ, ಮನೆ ನಂ.2-67-2, ಬ್ರಹ್ಮನಾಗರಕೋಡಿ, ದೇರೆಬೈಲು, ಕೊಂಚಾಡಿ, ಮಂಗಳೂರು.
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ವಾರಣಾಸಿ ಟವರ್, ಮಿಷನ್ ಸ್ಟ್ರೀಟ್, ಮಂಗಳೂರು.

### ಅಧಿಸೂಚನೆ

ಅರ್ಜಿದಾರಳಾದ ಶ್ರೀಮತಿ ವಿದ್ಯಾವತಿ, ಇವರು ತಮ್ಮ ಪತಿಯಾದ ಶ್ರೀ ದಿ. ಚಂದ್ರಶೇಖರ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಸುರೇಶ್ ಬಿನ್ ರಾಮಯ್ಯ ದೇವಾಡಿಗ, ದೇರೆಬೈಲು, ಕೊಂಚಾಡಿ, ಮಂಗಳೂರು. ಇವರಲ್ಲಿ ಕೆಲಸಗಾರರಾರಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 1.10.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 1732

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್-117/2006 ಎಫ್, ದಿನಾಂಕ: 7ನೇ ಡಿಸೆಂಬರ್ 2006**

**ಅರ್ಜಿದಾರರು:**

1. ಶ್ರೀ ಕೂಸಪ್ಪ ಗೌಡ, ಬಿನ್: ಲೇಟ್ ಮಂಜಪ್ಪ ಗೌಡ,
2. ಶ್ರೀಮತಿ ವೆಂಕಮ್ಮ ಕೋಂ. ಶ್ರೀ ಕೂಸಪ್ಪ ಗೌಡ, ವಾಸ: ಕೊಂಬಕೋಡಿ ಹೌಸ್, ಕೋಡಿಂಬಾಡಿ ವಿಲೇಜ್, ಪುತ್ತೂರು ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:**

1. ಮೆ: ಲ್ಯಾನ್ಸಿ ಕನ್ ಸ್ಟ್ರಕ್ಷನ್ಸ್, ಹೋಲಿ ಫ್ಯಾಮಿಲಿ ಕ್ಯಾಸ್‌ಟಲ್, ನೆಹರು ಅವಿನ್ಯೂ ರೋಡ್, ಲಾಲ್‌ಬಾಗ್, ಮಂಗಳೂರು.
2. ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ., ಮೊದಲನೇ ಮಹಡಿ, ಎಮ್‌ಜಾಯ್ಸ್ ಕಾಂಪೆಕ್ಸ್ ಬಲ್ಮಠ, ಮಂಗಳೂರು ತಾಲ್ಲೂಕು.

### ಅಧಿಸೂಚನೆ

ಅರ್ಜಿದಾರನಾದ ಶ್ರೀ ಕೂಸಪ್ಪ ಗೌಡ, ಇವರು ತಮ್ಮ ಮಗನಾದ ಶ್ರೀ ದಿ. ಲೋಕೇಶ್ ಇವರು 1ನೇ ಪ್ರತಿವಾದಿಗಳಾದ ಮೆ: ಲ್ಯಾನ್ಸಿ ಕನ್‌ಸ್ಟ್ರಕ್ಷನ್ಸ್, ಹೋಲಿ ಫ್ಯಾಮಿಲಿ ಕ್ಯಾಸ್‌ಟಲ್, ನೆಹರು ಅವಿನ್ಯೂ ರೋಡ್, ಲಾಲ್‌ಬಾಗ್, ಮಂಗಳೂರು, ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ

ನಿರತರಾಗಿದ್ದಾಗ, ದಿನಾಂಕ: 9.08.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1733

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು ಮಂಗಳೂರು ವಿಭಾಗ, ಮಂಗಳೂರು.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003 - Clarification under Section 59(4) regarding the rate of tax applicable on toys (non-battery operated) and playground equipments (non-battery operated).

**Ref:** Application dated 5.10.2006 of M/s Sheila Agencies, Bangalore.

In his application cited at reference above, the applicant has sought clarification regarding the rate of tax applicable on toys (non-battery operated) and playground equipments (non battery operated).

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.148/06-07, Dated: 7th December 2006**

It is hereby clarified as under:

| Sl. No. | Commodity | Rate of tax as per Schedule |
|---|---|---|
| 1. | Non-mechanical toys | 4% vide Sl.No.94 of Third Schedule to the Karnataka Value Added Tax Act, 2003. |
| 2. | Play ground equipments (not operated by battery or electricity) | 12.5% under Section 4(1)(b) of the Karnataka Value Added Tax Act, 2003. |

**B.A. HARISH GOWDA**

P.R. 1734

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003 - Clarification under Section 59(4) regarding the rate of tax applicable on coconut shells.

**Ref:** Application dated 22.9.2006 of M/s Sri Sharada Enterprises, Nanjangud.

**Preamble:**

In its application cited at reference (1) above, the dealer had sought clarification regarding the rate of tax applicable on coconut shells.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of

the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.159/06-07, Dated: 4th December 2006**

It is hereby clarified that coconut shells are taxable at 4% as per Sl.No.174 of the Notification No. FD 197 CSL 2005(6), dated 30.4.2005 issued under Section 4(1)(a) read with entry 51 of the Third Schedule to the Karnataka Value Added Tax Act, 2003.

**B.A. HARISH GOWDA**
P.R. 1735 Commissioner of Commercial Taxes,
(Karnataka), Bangalore.

**ಕಾರ್ಯನಿರ್ವಾಹಕ ಇಂಜಿನಿಯರವರ ಕಛೇರಿ, ಲೋಕೋಪಯೋಗಿ ಇಲಾಖೆ ಗದಗ ವಿಭಾಗ ಗದಗ**

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)**

ಕೈಪಿಡಿ-೧

ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು

ಕರ್ನಾಟಕ ರಾಜ್ಯದಲ್ಲಿನ ಗದಗ ಜಿಲ್ಲೆಯ ಲೋ ಇ ವ್ಯಾಪ್ತಿಯ ರಸ್ತೆಗಳ ನಿರ್ಮಾಣ ನಿರ್ವಹಣೆ ಮತ್ತು ದುರಸ್ತಿ ಕಾರ್ಯಗಳನ್ನು ಮತ್ತು ಎಲ್ಲಾ ಸರ್ಕಾರಿ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣೆ ಕೆಲಸಗಳನ್ನು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸುವ ದೃಷ್ಟಿಯಿಂದ ೧೯೭೨ ರಲ್ಲಿ ಹೊಸ ಜಿಲ್ಲೆಯಾಗಿ ಪ್ರಾರಂಭವಾಗುವ ಪೂರ್ವದಲ್ಲಿಯೇ ಕಾರ್ಯನಿರ್ವಾಹಕ ಇಂಜನೀಯರರು ಲೋ ಇ ಕಛೇರಿಯು ಅಸ್ತಿತ್ವಕ್ಕೆ ಬಂದಿರುತ್ತದೆ. ಈ ವಿಭಾಗದಡಿಯಲ್ಲಿ ಗದಗಃ ರೋಣಃ ಮುಂಡರಗಿಃ ಶಿರಹಟ್ಟಿಃ ನರಗುಂದ ಹೀಗೆ ೫ ಉಪ- ವಿಭಾಗಗಳ ಭೌಗೋಳಿ ಕ ವಿಸ್ತಿ ೀ ರ್ಣವು ೪೬೫೬ ಚದರ ಕಿಮೀ ಇರುತ್ತದೆ. ಮತ್ತು ೨೦೦೧ ರ ಜನಗಣತಿ ಪ್ರಕಾರ ೯೭೧೯೫೫ ಜನಸಂಖ್ಯೆ ಇರುತ್ತದೆ. ಈ ವಿಭಾಗವು ಅಧೀಕ್ಷಕ ಇಂಜನೀಯರರು ಲೋ . ಇ . ಧಾರವಾಡ ವೃತ್ತ ಧಾರವಾಡ ಹಾಗೂ ಮುಖ್ಯ ಇಂಜನೀಯರರು ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ. ಈ ವಿಭಾಗದಡಿಯಲ್ಲಿ ೨೦೦೬-೨೦೦೭ ರ ಪ್ರಕಾರ ರಸ್ತೆ ಸೇತುವೆ ಮತ್ತು ಕಟ್ಟಡಗಳ ವಿವರ ಈ ಕೆಳಗಿನಂತಿರುತ್ತದೆ.

ಅ) ರಸ್ತೆಗಳು

| | | |
|---|---|---|
| ೧) ರಾಜ್ಯ ಹೆದ್ದಾರಿ | ಕಿಮೀ | ೫೦೭.೦೩ |
| ೨) ಜಿಲ್ಲಾ ಮುಖ್ಯ ರಸ್ತೆ | ಕಿಮೀ | ೬೪೧.೯೦ |

ಬ) ಸೇತುವೆಗಳು

| | | |
|---|---|---|
| ೧) ಬೃಹತ್ ಸೇತುವೆಗಳು | ನಂ | ೨೭ |
| ೨) ಸಣ್ಣ ಸೇತುವೆಗಳು | ನಂ | ೩೬೭ |
| ೩) ಅಡ್ಡ ಮೋರಿಗಳು | ನಂ | ೧೦೭೦ |

ಕ) ಕಟ್ಟಡಗಳು

| | | |
|---|---|---|
| ೧) ಮುಖ್ಯ ಕಟ್ಟಡಗಳು | ನಂ | ೪೩ |
| ೨) ಸಣ್ಣ ಕಟ್ಟಡಗಳು | ನಂ | ೪೫ |

ಕಾರ್ಯನಿರ್ವಾಹಕ ಇಂಜನೀಯರರು ಇವರು ಲೋ ಇ ಗದಗ ವಿಭಾಗ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ ಇವರ ಅಧೀನದಲ್ಲಿ ೪ ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1. ಆಡಳಿತ ಶಾಖೆ
2. ಲೆಕ್ಕ ಶಾಖೆ
3. ಉಗ್ರಾಣ ಶಾಖೆ
4. ತಾಂತ್ರಿಕ ಶಾಖೆ

೧. ಆಡಳಿತ ಶಾಖೆ

ಕಾರ್ಯನಿರ್ವಾಹಕ ಇಂಜನೀಯರರು ಲೋ ಇ ಗದಗ ಕಛೇರಿಯಲ್ಲಿ ಮಂಜೂರಾಗಿರುವ ೩೦ ಹುದ್ದೆಗಳ ಪೈಕಿ ೩೦ ಸಿಬ್ಬಂದಿಯವರು ಕಾರ ್ ರ್ ನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ ಎ-೨ ವರ್ಗ ಬಿ-೪ ವರ್ಗ- ಸಿ-೧೯ ಮತ್ತು ವರ್ಗ ಡಿ-೫ ಸಂಖ್ಯೆಗಳಿರುತ್ತವೆ.

ಅಧೀಕ್ಷಕರು ಆಡಳಿತ ಶಾಖೆಯ ಮುಖ್ಯಸ್ಥರಾಗಿದ್ದು ಅವರ ಕೆಳಗೆ ಪ್ರಥಮ ದರ್ಜೆ ಸಹಾಯಕರು-೧ ದ್ವಿತಿಯ ದರ್ಜೆ ಸಹಾಯಕರು ೪, ಶೀಘ್ರಲಿಪಿಗಾರರು-೧ ಬೆರಳಚ್ಚುಗಾರರು-೨ ಕಾರ್ಯ ನಿರ್ವಹಿಸುತ್ತಾರೆ. ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು, ಭವಿಷ್ಯ ನಿಧಿಯ ದಾಖಲೆಗಳನ್ನು ನಿರ್ವಹಿಸುವದು ವರ್ಗಾವಣೆ ವಿಚಾರಣೆ, ಕಾರ್ಯನಿರ್ವಹಿಸುವದು ಹಾಗೂ ವಿದ್ಯುಚ್ಛಕ್ತಿ ಮತ್ತು ದೂರವಾಣಿ ಬಿಲ್ಲುಗಳನ್ನು ಪಾವತಿಸುವದು ದಾಖಲೆಗಳನ್ನು ಸಂಗ್ರಹಿಸಿ ಕಾಪಾಡುವದು. ಎಲ್ಲ ಕಾರ್ಯಗಳನ್ನು ಕಾರ್ಯನಿರ್ವಾಹಕ ಇಂಜನೀಯರವರ ಒಪ್ಪಿಗೆ ಹಾಗೂ ಆದೇಶಗಳ ಪ್ರಕಾರ ಪಾಲಿಸುತ್ತಾರೆ.

ಈ ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಸಂಕ್ಷಿಪ್ತ ಕೆಲಸಗಳ ವಿವರಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

೧) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ವಿದ್ಯುಚ್ಛಕ್ತಿ ಮತ್ತು ದೂರವಾಣಿಗೆ ಸಂಬಂಧಿಸಿದ ಸಾದಿಲ್ವಾರು ಬಿಲ್ಲುಗಳನ್ನು ತಯಾರಿಸಿ ಪಾವತಿಸುವದು.

೨) ನಗದು ಮತ್ತು ಸ್ವೀಕೃತಿ ಮತ್ತು ರವಾನೆ ಶಾಖೆಯು ದಾಖಲೆಗಳನ್ನು ನಿರ್ವಹಿಸುವದು. ಸೇವಾ ಅಂಚೆ ಚೀಟಿಗಳ ದಾಖಲೆ ನಿರ್ವಹಣೆ, ದೈನಂದಿನ ಪತ್ರಗಳನ್ನು ರವಾನಿಸುವದು ಹಾಗೂ ಸ್ವೀಕರಿಸುವದು ಹೀಗೆ ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತದೆ.

೩) ನೌಕರರ ಶಿಸ್ತು ಪ್ರಕರಣ ಮತ್ತು ಅವ್ಯವಹಾರಗಳ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧೀಕ್ಷಕ ಇಂಜನೀಯರವರಿಗೆ ವರದಿ ಸಲ್ಲಿಸುವದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತದೆ.

೪) ೪ ನೇ ದರ್ಜೆ ಗುತ್ತಿ ಗೆದಾರರ ನೊಂದಣಿ ಃ ನವೀಕರಣ ಪ್ರಕಾರಣಗಳು

೫) ಅಧಿಕಾರಿ ಃ ಸಿಬ್ಬಂದಿಗಳ ವೇತನ ಬಟವಡೆ

೬) ಆಸ್ತಿ ಮತ್ತು ಹೊಣೆಗಾರಿಕೆ ಪತ್ರ ವ್ಯವಹಾರಗಳು

೭) ಕಾರ್ಯ ನಿರ್ವಹಣಾ ವರದಿಗಳು ಹಾಗೂ ರಹಸ್ಯ ವರದಿಗಳನ್ನು ಸಲ್ಲಿಸುವದು

೮) ವಿಧಾನ ಸಭೆ, ವಿಧಾನ ಪರಿಷತ್ತು ಹಾಗೂ ಭರವಸೆಗಳ ವರದಿಯನ್ನು ರವಾನಿಸುವದು.

೯) ಆಡಳಿತಕ್ಕೆ ಸಂಬಂಧಿಸಿದಂತೆ ಆಯವ್ಯಯ ಅಂದಾಜು ಪಟ್ಟಿ ತಯಾರಿಸುವದು.

೧೦) ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮಕ್ಕೆ ಸಂಬಂಧಿಸಿದ ಪತ್ರ ವ್ಯವಹಾರ

೧೧) ನ್ಯಾಯಾಲಯ ಪ್ರಕರಣ, ಲೋಕಾಯುಕ್ತ ಪ್ರಕರಣಗಳ ನಿರ್ವಹಣೆ

೧೨) ಗದಗದಲ್ಲಿಯ ಪ್ರವಾಸಿ ಮಂದಿರ ಃ ನಿರೀಕ್ಷಣಾ ಮಂದಿರಗಳನ್ನು ಕಾಯ್ದಿರಿಸುವದು.

೨) ಲೆಕ್ಕ ಶಾಖೆ:-

ಲೆಕ್ಕ ಪರಿಶೋಧನಾಧಿಕಾರಿಗಳು ಲೆಕ್ಕ ಶಾಖೆಯ ಮುಖ್ಯಸ್ಥರಾಗಿದ್ದು ಅವರ ಕೆಳಗೆ ೨ ಪ್ರಥಮ ದರ್ಜೆ ಲೆಕ್ಕ ಸಹಾಯಕರು ಹಾಗೂ ೨ ದ್ವಿತೀಯ ದರ್ಜೆ ಲೆಕ್ಕ ಸಹಾಯಕರು ಕೆಲಸಗಳನ್ನು ನಿರ್ವಹಿಸುತ್ತಾರೆ ಲೆಕ್ಕ ಶಾಖೆಯ ಕಾರ್ಯಭಾರ ಈ ಕೆಳಗಿನಂತಿರುತ್ತದೆ.

ಲೋ.ಇ. ಗದಗ ವಿಭಾಗಕ್ಕೆ ಸಂಬಂಧಿಸಿದಂತೆ ಲೆಕ್ಕ ಪತ್ರ ಕಾಮಗಾರಿಗಳು, ನಗದು ಪುಸ್ತಕಗಳ ನಿರ್ವಹಣೆ, ಲೆಕ್ಕಪತ್ರ ಕ್ರೋಢೀಕರಣ, ಮಹಾಲೇಖಪಾಲರ ಆಡಿಟ್ ಪ್ಯಾರಾ, ಎಂಎಂಆರ್ ಆಯವ್ಯಯ ತಯಾರಿಕೆ, ಅನುದಾನ ಮರು ಪಾವತಿ, ಕಾಮಗಾರಿಗಳ ಟೆಂಡರ ಪ್ರಕ್ರೀಯೇಗಳ ಪರಿಶೀಲನೆ, ಬಿಲ್ಲುಗಳ ತನಿಖೆ, ಹಣ ಸಂದಾಯ ಬಾಕಿ ಬಿಲ್ಲುಗಳ ಕ್ರೊಢೀಕೃತ ಪ್ರಸ್ತಾವನೆ ತಯಾರಿಸುವದು, ಬಾಕಿ ಬಿಲ್ಲುಗಳ ಪಾವತಿಗೆ ಹಣ ಭರವಸೆ ಬೇಡಿಕೆ ಸಲ್ಲಿಸುವದು. ತನಿಖಾ ವರದಿ ಡ್ರಾಫ್ಟ ಪ್ಯಾರಾಗಳ ಆಧಾರದ ಮೇಲೆ ಸಿ ಮತ್ತು ಎ ಜಿ ವರದಿಗಳಿಗೆ ಉತ್ತರಗಳನ್ನು ತಯಾರಿಸಿ ಸಲ್ಲಿಸುವದು ಹಾಗೂ ಲೆಕ್ಕ ಪತ್ರ ಶಾಖೆಗೆ ಸಂಬಂಧಿಸಿದ ಎಲ್ಲಾ ಪತ್ರ ವ್ಯವಹಾರಗಳನ್ನು ನಿರ್ವಹಿಸುವದು.

೩) ಉಗ್ರಾಣ ಶಾಖೆ:-

ಉಗ್ರಾಣ ಶಾಖೆಯ ಕಾರ್ಯಭಾರವನ್ನು ಉಗ್ರಾಣ ಅಧೀಕ್ಷಕರು ಹಾಗೂ ದ್ವಿತೀಯ ದರ್ಜೆ ಉಗ್ರಾಣ ಸಹಾಯಕರು ನೋಡಿಕೊಳ್ಳುತ್ತಿದ್ದಾರೆ. ತುರ್ತು ಪರಿಸ್ಥಿತಿಯಲ್ಲಿ ಏನಾದರೂ ಸಾಮಗ್ರಿಗಳನ್ನು ಪೂರೈಸಬೇಕಾದಲ್ಲಿ ಪಾರದರ್ಶಕ ನಿಯಮದಂತೆ ಸಾಮಗ್ರಿಗಳನ್ನು ಖರೀದಿಸಲು ಈ ಶಾಖೆಯಿಂದ ಕ್ರಮ ಕೈಕೊಳ್ಳಲಾಗುತ್ತದೆ. ಅಲ್ಲದೆ ಹಾಲಿ ಇರುವ ಸಾಮಗ್ರಿಗಳ ವಹಿ ಇತ್ಯಾದಿಗಳನ್ನು ಈ ಶಾಖೆಯಲ್ಲಿ ನಿರ್ವಹಿಸಲಾಗುತ್ತದೆ. ಅಲ್ಲದೇ ಯಂತ್ರೋಪಕರಣಗಳ ನಿರ್ವಹಣೆ ಮತ್ತು ನಿಯತಕಾಲಿಕ ವರದಿಗಳನ್ನು ಸಲ್ಲಿಸುವ ಜವಾಬ್ದಾರಿಯು ಈ ಶಾಖೆಗೆ ಸಂಬಂಧಿಸಿರುತ್ತದೆ.

೪) ತಾಂತ್ರಿಕ ಶಾಖೆ:-

ಕಾರ್ಯನಿರ್ವಾಹಕ ಇಂಜನೀಯರವರು ಈ ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು ಇವರಿಗೆ ಸಹಾಯಕ್ಕಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರವರ ಹುದ್ದೆಯು ಒಬ್ಬರು ತಾಂತ್ರಿಕ ಸಹಾಯಕರು ಹಾಗೂ ಸಹಾಯಕ ಇಂಜನೀಯರರು-೩ ಕಿರಿಯ ಇಂಜನೀಯರರು–೧ ಆಕೃತಿ ರಚನಾಕಾರರು–೧ ಅನುರೇಖಕರು–೧ ಸಾಂಖ್ಯಿಕ ನಿರೀಕ್ಷಕರು-೧ ಕಾರ್ಯನಿರ್ವಹಿಸುತ್ತಾರೆ.

೧) ಉದ್ದೇಶಿಸಿರುವ ರಸ್ತೆ ಸೇತುವೆ ಮತ್ತು ಕಟ್ಟಡ ಕಾಮಗಾರಿಗಳನ್ನು ತಾಂತ್ರಿಕ ವಾಗಿ ಪರಿಶೀಲಿಸುವದು.

೨) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ಕರಡು ಟೆಂಡರ್ ಪತ್ರಿಕೆಗಳನ್ನು ಅಂತಿಮಗೊಳಿಸುವದು.

೩) ಯೋಜನೆ (ಪ್ಲ್ಯಾನ್) ಅಡಿಯಲ್ಲಿ ಬರುವ ರೂ಼ ೪.೦೦ ಲಕ್ಷದವರೆಗಿನ ಕೆಲಸಗಳಿಗೆ ಆಡಳಿತಾತ್ಮಕ ಅನುಮೋದನೆ ಹೊಂದಿರುವ ಅಂದಾಜು ಪತ್ರಿಕೆಗಳಿಗೆ ತಾಂತಿಜ್ರಕ ಮಂಜೂರಾತಿ ನೀಡುವದು

೪) ಯೋಜನೆಯೇತರ ( ನಾಲ್ ಪ್ಲ್ಯಾನ್) ಅಡಿಯಲ್ಲಿ ಬರುವ ರೂ಼ ೨.೦೦ ಲಕ್ಷದ ವರೆಗಿನ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ಹೊಂದಿರುವ ಅಂದಾಜು ಪತ್ರಿಕೆಗಳಿಗೆ ತಾಂತ್ರಿಕ ಮಂಜೂರಾತಿ ನೀಡುವದು.

೫) ಯೋಜನೆಗಳ ಪ್ರಗತಿ ಕುರಿತು ಪರಿಶೀಲಿಸುವದು ಹಾಗೂ ಉಪ-ವಿಭಾಗಗಳಿಂದ ವರದಿ ಪಡೆಯುವದು ಮತ್ತು ಮೇಲಾಧಿಕಾರಿಗಳಿಗೆ ವರದಿ ಸಲ್ಲಿ ಸುವದು.

೬) ಎಂ ಎಂ ಆರ್ ಮತ್ತು ಕೆ ಡಿ ಪಿ ಸಭೆಗಳಿಗೆ ಪ್ರಗತಿ ವರದಿ ತಯಾರಿಸುವದು ಮತ್ತು ಹಾಜರಾಗುವದು.

೭) ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವದು ಹಾಗೂ ಅನುಮೋದನೆ ಪಡೆಯುವದು.

೮) ಅಂದಾಜು ಸಮಿತಿ ಸಭೆ ಮತ್ತು ಭರವಸೆ ಸಮಿತಿ ಸಭೆಗಳಿಗೆ ವರದಿ ತಯಾರಿಸುವದು ಹಾಗೂ ಸಮಿತಿಗೆ ಹಾಜರಾಗುವದು.

೯) ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಪ್ರಶ್ನೆಗಳಿಗೆ ಉತ್ತರಿಸುವದು.

೧೦) ಹೆದ್ದಾರಿ ಕೋಶದ ಕಾರ್ಯನಿರ್ವಹಣೆ

೧೧) ಸಾಂಖ್ಯಿಕ ಶಾಖೆಯ ಕಾರ್ಯನಿರ್ವಹಣೆ.

ಕೈಪಿಡಿ-೨

ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ

ಕಾರ್ಯನಿರ್ವಾಹಕಇಂಜನೀಯರರು ಲೋ ಇ ಗದಗ ವಿಭಾಗ ಗದಗ ಇವರು ವಿಭಾಗದ ಮುಖ್ಯಸ್ಥರಿದ್ದು ಇವರು ಅಧೀಕ್ಷಕ ಇಂಜನೀಯರರು ಲೋ ಇ ಧಾರವಾಡ ವೃತ್ತ ಧಾರವಾಡ ಇವರ ಅಡಿಯಲ್ಲಿ ಕೆಲಸ ನಿರ್ವಹಿಸುತ್ತಾರೆ.

ಕಾರ್ಯನಿರ್ವಾಹಕ ಇಂಜನೀಯರವರ ಕಾರ್ಯಭಾರ ಈ ಕೆಳಗಿನಂತಿರುತ್ತದೆ.

ಕಾರ್ಯನಿರ್ವಾಹಕ ಇಂಜನೀಯರುಗಳ ಕಾರ್ಯಭಾರ ಈ ಕೆಳಕಂಡಂತಿದೆ.

೧) ಕಾರ್ಯನಿರ್ವಾಹಕ ಇಂಜನೀಯರವರ ನಿಯಮಗಳ ಪ್ರಕಾರ ಕಾಮಗಾರಿಯ ಅಂದಾಜುಗಳಿಗೆ ಮಂಜೂರಾತಿ ನೀಡುವ ಅಧಿಕಾರ ಹೊಂದಿರುತ್ತಾರೆ. (ಸರ್ಕಾರದ ಆದೇಶ ನಂಃ ಪಿಡಬ್ಲ್ಯೂಡಿಃಎಫ್‌ಸಿಆರ್ಃ ೯೩ ದಿಃ ೧೫-೧೨-೧೯೯೪ ರಂತೆ)

೨) ಪ್ರತಿ ತಿಂಗಳು ಎಂ ಎಂಆರ್ ಸಭೆಯನ್ನು ನಡೆಸಿ ಕಾಮಗಾರಿಗಳ ಆರ್ಥಿಕ ಹಾಗೂ ಭೌತಿಕ ಪ್ರಗತಿಯನ್ನು ಪರಿಶೀಲನೆ ಮಾಡುವದು.

೩) ವಿಧಾನ ಸಭೆ ಮತ್ತು ವಿಧಾನ ಪರಿಷತ್ತು ನಡುವಳಿ ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವದು.

೪) ಅಧೀನ ಉಪ ವಿಭಾಗಗಳ ಆಡಳಿತಾತ್ಮಕ ತಪಾಸಣೆಯನ್ನು ನಿಯಮಾವಳಿಯ ಪ್ರಕಾರ ನಡೆಸುವದು.

೫) ಮಹಾಲೇಖಪಾಲರಿಗೆ ಪ್ರತಿ ತಿಂಗಳು ನಿಗದಿತ ದಿನಾಂಕದೊಳಗೆ ಸಂಬಂಧಿಸಿದ ವಿಭಾಗಗಳ ಲೆಕ್ಕ ವಿಚಾರಗಳು ಮತ್ತು ಉಗ್ರಾಣ ವಿಚಾರಗಳ ವಿಷಯಗಳಿಗೆ ಸಂಬಂಧಿಸಿದ ವರದಿಯನ್ನು ಒಪ್ಪಿಸುವದು.

೬) ಮಹಾಲೇಖಪಾಲರ ತಪಾಸಣಾ ವರದಿಗೆ ಉತ್ತರವನ್ನು ನೀಡುವದು.

೭) ಸರ್ಕಾರ , ವಲಯದ ಮತ್ತು ವೃತ್ತದ ಸಭೆಗಳಿಗೆ ಹಾಜರಾಗುವದು ಹಾಗೂ ಸಭೆಗಳಲ್ಲಿ ಚರ್ಚಿಸಿದ ವಿಷಯಗಳ ಬಗ್ಗೆ ನಿಯಮಾನುಸಾರ ಸೂಕ್ತ ಕ್ರಮ ತೆಗೆದುಕೊಳ್ಳುವದು.

೮) ಸಾಮಾನ್ಯ ಆಡಳಿತವನ್ನು ನಿರ್ವಹಿಸುವದು.

೯) ಪ್ರಗತಿಯಲ್ಲಿರುವ ಕಾಮಗಾರಿಗಳ ಪ್ರಗತಿಯನ್ನು ತಪಾಸಣೆಯನ್ನು ನಿಯಮಾವಳಿ ಪ್ರಕಾರ ನಡೆಸುವದು.

೧೦) ವಿಭಾಗ ಕಛೇರಿಯಲ್ಲಿರುವ ಮಾಹಿತಿಯನ್ನು ಮಾಹಿತಿ ಪಡೆಯುವ ಹಕ್ಕಿನ ನಿಯಮದ ಪ್ರಕಾರ ಅರ್ಜಿದಾರರಿಗೆ ನಿಗದಿತ ಸಮಯದೊಳಗೆ ಮಾಹಿತಿ ನೀಡುವದು.

೧೧) ನಾಲ್ಕನೇ ದರ್ಜೆ ಗುತ್ತಿಗೆದಾರರ ನೊಂದಣಿ, ನವೀಕರಣ ಹಾಗೂ ಗುತ್ತಿಗೆದಾರರ ವಾರ್ಷಿಕ ರಹಸ್ಯ ವರದಿಗಳನ್ನು ನಿರ್ವಹಿಸುವದು ಮತ್ತು ಮೇಲಾಧಿಕಾರಿಗಳಿಗೆ ಒಪ್ಪಿಸುವದು.

೧೨) ಲೋಕೋಪಯೋಗಿ ವಿಭಾಗಕ್ಕೆ ಸಂಬಂಧಿಸಿದಂತೆ ಇಡೀ ವಿಭಾಗದ ಅಂಕಿ ಅಂಶವನ್ನು ನಿರ್ವಹಿಸುವದು.

೧೩) ವಿಭಾಗ ಕಛೇರಿಯ ತಾಂತ್ರಿಕ ಶಾಖೆ, ಆಡಳಿತ ಶಾಖೆ ಮತ್ತು ಲೆಕ್ಕ ಶಾಖೆಯಲ್ಲಿನ ಶಾಖಾಧಿಕಾರಿಗಳು ಕಾರ್ಯನಿರ್ವಾಹಕ ಇಂಜನೀಯರವರಿಗೆ ವಿಭಾಗ ಕಛೇರಿಯ ಕೆಲಸ ಕಾರ್ಯಗಳಲ್ಲಿ ನಿಯಮಾನುಸಾರ ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸುವದು.

೧೪) ತಾಂತ್ರಿಕ ಶಾಖೆಯ ಮುಖ್ಯಸ್ಥರಾಗಿ ಒಬ್ಬ ಸಹಾಯಕ ಕಾರ್ಯಪಾಲಕ ಇಂಜನೀಯರ ః ಸಹಾಯಕ ಇಂಜನೀಯರ ః ಕಿರಿಯ ಇಂಜನೀಯರ ಆಡಳಿತ ಶಾಖೆಯಲ್ಲಿ ಅಧೀಕ್ಷಕರು ః ಪ್ರಥಮ ದರ್ಜೆ ಸಹಾಯಕರು ಮತ್ತು ಲೆಕ್ಕ ಶಾಖೆಯಲ್ಲಿ ಒಬ್ಬ ಲೆಕ್ಕ ಪರಿಶೋಧನಾಧಿಕಾರಿಗಳು ಕಾರ್ಯನಿರ್ವಾಹಕ ಇಂಜನೀಯರವರಿಗೆ ಜವಾಬ್ದಾರಿಯುತರಾಗಿರುತ್ತಾರೆ.

೧೫) ಬೇರೆ ಬೇರೆ ಇಲಾಖೆಗಳಲ್ಲಿ ನಿಯೋಜನೆ ಮೇಲೆ ಕೆಲಸ ನಿರ್ವಹಿಸುತ್ತಿರುವ ಲೋಕೋಪಯೋಗಿ ಇಲಾಖೆಯ ಸಿಬ್ಬಂದಿಯವರ ಸೇವಾ ವಿವರಗಳನ್ನು ನಿರ್ವಹಿಸುವದು.

೧೬) ಭೂ ಸ್ವಾಧೀನ ಪ್ರಕರಣಗಳು, ರಹಸ್ಯ ವರದಿಗಳು, ಕೆ ಸಿ ಎಸ್ ಆರ್ ಹಾಗೂ ಸಿಸಿಎ ನಿಯಮಾವಳಿಗಳ ಪ್ರಕಾರ ಆಡಳಿತ ನಿರ್ವಹಣೆ, ಕೆಟಿಟಿಪಿ ಆ್ಯಕ್ಟ ಮತ್ತು ನಿಯಮಗಳ ಪ್ರಕಾರ ಟೆಂಡರುಗಳನ್ನು ಕರೆಯುವದು ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ನಿರ್ವಹಣೆ, ರಸ್ತೆ ಸೇತುವೆ ಹಾಗೂ ಕಟ್ಟಡಗಳ ನಿರ್ಮಾಣ ಮತ್ತು ನಿರ್ವಹಣೆ ಇತ್ಯಾದಿ ಮಾಡುವದು.

ಕೈಪಿಡಿ-೩

ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿವಿಧಾನಗಳು ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳುಃ

ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

ಲೋಕೋಪಯೋಗಿ ಇಲಾಖೆಯ ಸಂಪುತೆ ಭಾಗ-೧ ಮತ್ತು ಭಾಗ-೨

ಕರ್ನಾಟಕ ಪಾರದರ್ಶಕ ನಿಯಮ

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ-೧ ಮತ್ತು ಭಾಗ-೨ ನ್ನು ಅನುಸರಿಸಲಾಗುವದು

ಭೂ ಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

ಆಡಳಿತವನ್ನು ನಿರ್ವಹಿಸಲು

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು

ಕರ್ನಾಟಕ ಆರ್ಥಿಕ ಸಂಹಿತೆ

ಕರ್ನಾಟಕ ಖಜಾನೆ ಸಂಹಿತೆ

ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು

ಇವುಗಳನ್ನು ಅನುಸರಿಸಲಾಗುತ್ತಿದೆ.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲಾ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು, ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕಔಟ್‌ನೀಡಿ ಕೆಲಸ ಚಾಲನೆ ಮಾಡುತ್ತಾರೆ. ಸಂಬಂಧಿಸಿದ ಸಹಾಯಕ ಃ ಕಿರಿಯ ಇಂಜನೀಯರರು ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು, ಆಗಿಂದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಇಂಜನೀಯರರು, ಅಧೀಕ್ಷಕ ಇಂಜನೀಯರರು, ಮುಖ್ಯ ಇಂಜನೀಯರರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆ ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಇಂಜನೀಯರರು, ಅಧೀಕ್ಷಕ ಇಂಜನೀಯರರು ಮತ್ತು ಮುಖ್ಯ ಇಂಜನೀಯರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತಿದೆ.

ಅಕೌಂಟೆಬಿಲಿಟಿ ಬಗ್ಗೆ ಮಹಾಲೇಖಪಾಲಕರು, ವರ್ಷಕ್ಕೊಮ್ಮೆ ಸಂಬಂಧಿತ ವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೆ ಮುಖ್ಯ ಇಂಜನೀಯರವರ ಕಛೇರಿ ಅಧೀಕ್ಷಕ ಇಂಜನೀಯರವರ ಕಛೇರಿಯಿಂದಲೂ ವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡಾ ನಿವೇಶನವನ್ನು ಪರಿವೀಕ್ಷಣೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

ಕೈಪಿಡಿ-೪

ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು

ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಃ

ಸರ್ಕಾರಿ ಆದೇಶ ಸಂಖ್ಯೆ ಃ ಪಿಡಬ್ಲ್ಯೂ-೧ ಎಫ್ ಸಿ ಆರ್ ೯೩ ಬೆಂಗಳೂರು ದಿನಾಂಕಃ- ೧೫-೧೨-೧೯೯೪

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಃ

ಸರ್ಕಾರಿಆದೇಶ ನಂಃ ಎಫ್ ಡಿ-೧ – ಟಿಎಫ್‌ಪಿ ೨೦೦೧ ಬೆಂಗಳೂರು ದಿನಾಂಕಃ- ೨-೨-೨೦೦೧

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಆರ್ಥಿಕ ಸಂಹಿತೆ

ಕೈಪಿಡಿ-೫

ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರ ು ವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು ಕೈಪಿಡಿಗಳ ವಿವರ

ಕಛೇರಿ ಕೈಪಿಡಿ ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು

ಕರ್ನಾಟಕ ಸರ್ಕಾರಿ (ವರ್ಗೀಕರಣ, ನಿಯಂತ್ರಣ ಮತ್ತು ಅಫೀಲು) ನಿಯಮಗಳು

ಕರ್ನಾಟಕ ಆರ್ಥಿಕ ಸಂಹಿತೆ

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ-೧ ಮತ್ತು ಭಾಗ-೨

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ –೨೦೦೦

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ-೧ ಮತ್ತು ಭಾಗ-೨ ನ್ನು ಅನುಸರಿಸಲಾಗುವದು.

ಭೂಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆ ೧೯೯೬ ಮತ್ತು ೧೯೪೦

ಕರ್ನಾಟಕ ನೀರಾವರಿ ಕಾಯ್ದೆ ೧೯೬೫

ಐಎಸ್ ಕೋಡ್ಸ್

ಸಾದಿಲ್ವಾರು ವೆಚ್ಚದ ಕೈಪಿಡಿ

ಕರ್ನಾಟಕ ಖಜಾನೆ ಸಂಹಿತೆ

ಚಾಲ್ತಿ ದರಪಟ್ಟಿ

ಬಜೆಟ್ ಕೈಪಿಡಿ

ಹೆದ್ದಾರಿ ಕಾಯ್ದೆ ೧೯೬೪ ರ ನಿಯಮಗಳು.

ಕೈಪಿಡಿ-೬

ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತಃಖ್ತೆ

ತಾಂತ್ರಿಕ ಶಾಖೆ

1. ಅಧೀಕ್ಷಕ ಇಂಜನೀಯರವರ ಮತ್ತು ಮುಖ್ಯ ಇಂಜನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.
2. ಪ್ರಗತಿಯ ವರದಿಗಳು
3. ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ
4. ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ
5. ಪಿ ಡಬ್ಲ್ಯೂ ಡಿ ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟಗಳ ವಹಿ
6. ದರ ಸೂಚಿ
7. ಎಂ ಎಂ ಆರ್ ಪುಸ್ತಕ
8. ಆಯವ್ಯಯ ಕಾಮಗಾರಿಗಳ ವಹಿ
9. ಟೆಂಡರ್‌ಗಳ ವಹಿ
10. ದಾಖಲಾತಿಗಳು
11. ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ
12. ಹೆಚ್ಚುವರಿ ಐಟಂ ದರ ಪಟ್ಟಿಯ ವಹಿ

ಪಿ ಬಿ ಃ ಡಿ ಬಿ ಯಲ್ಲಿರುವ ರಜಿಸ್ಟರ್ ಮಾಹಿತಿ

13. ಅಂದಾಜು ಪತ್ರಿಕೆ ಮಂಜೂರಾತಿ ರಜಿಸ್ಟರ್
14. ತುಂಡು ಗುತ್ತಿಗೆ ಪತ್ರ ಅನುಮೋದನೆ ರಜಿಸ್ಟರ್
15. ಟೆಂಡರ್ ಒಪ್ಪಂದ ಪತ್ರದ ರಜಿಸ್ಟರ್
16. ಟೆಂಡರ್ ತೆರೆಯುವ ರಜಿಸ್ಟರ್
17. ಸೇತುವೆಗಳ ರಜಿಸ್ಟರ್
18. ಕಟ್ಟಡಗಳ ರಜಿಸ್ಟರ್
19. ಟೋಪೊ ಶೀಟ್ ರಜಿಸ್ಟರ್
20. ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜು ಪತ್ರಿಕೆಗಳ ರಜಿಸ್ಟರ್
21. ಟೆಂಡರ್ ಪುಸ್ತಕ ಕೊಡುವ ರಜಿಸ್ಟರ್
22. ಟೆಂಡರ್ ಹಾಕುವಾಗ ಗುತ್ತಿಗೆದಾರರಿಂದ ಸಹಿ ಪಡೆದುಕೊಳ್ಳುವ ರಜಿಸ್ಟರ್
23. ಕಟ್ಟಡಗಳ ಭಾಡಿಗೆ ನಿಗದಿಪಡಿಸುವ ರಜಿಸ್ಟರ್

ದಾಖಲೆಗಳುಃ- ಆಡಳಿತ ಶಾಖೆ

ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ

1. ಹಾಜರಾತಿ ವಹಿ
2. ಪತ್ರಾಂಕಿತ ಮತ್ತು ಪತ್ರಾಂಕಿತ ವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ವಹಿ ಮತ್ತು ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ
3. ಸಂಘಟನಾ
4. ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತಖ್ತೆ
5. ಕೆಲಸ ವಿತರಣರ ತಖ್ತೆ
6. ವೇತನ ಬಡ್ತಿಯ ನಿಗಾ ವಹಿ
7. ವೇತನ ಬಡ್ತಿಯ ಮಂಜೂರಾತಿ ವಹಿ
8. ಇನ್ ಕಂಬೆನ್ಸಿ ವಹಿ
9. ರಹ ಸ್ಯ ವರದಿಗಳ ವಹಿ
10. ಆಸ್ತಿ ಮತ್ತು ದಾಜಿಜತ್ವ ತಖ್ತೆ ವಹಿ
11. ಮಹಾಲೇಖಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾ ವಹಿ
12. ನೌಕರರ ಸೇವಾ ವಹಿಗಳ ಪಟ್ಟಿ ಹಾಗೂ ವಹಿಗಳ ನಿಗಾ ವಹಿ
13. ಸೇವಾ ವಹಿ
14. ತಾತ್ಕಾಲಿಕ ಆಡಳಿತ ವಹಿ
15. ಇಲಾಖಾ ಪರೀಕ್ಷೆಗಳ ನಿಗಾ ವಹಿ
16. ದೂರವಾಣಿ ಟ್ರಂಕ್ ಕರೆಗಳ ವಹಿ
17. ಪರಿವೀಕ್ಷಣಾ ಟಿಪ್ಪಣೆ ಪುಸ್ತಕ

18. ಕಛೇರಿ ನೌಕರರ ಮನೆಗಳ ವಿಳಾಸ
19. ವಿಧಾನ ಸಭೆ ಃ ಪರಿಷತ್ ಪ್ರಶ್ನೆಗಳ ವಹಿ
20. ಕಡತಗಳ ವಹಿ ಮತ್ತು ವೈಯಕ್ತಿಕ ವಹಿ
21. ಪ್ರತಿ ಮಾಹೆಗಳ ಬಾಕಿ ಪಟ್ಟಿ
22. ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತಖ್ತೆ
23. ಸಾಮಾನ್ಯ ಸ್ವೀಕೃತಿ ವಹಿ
24. ರವಾನೆ ವಹಿ
25. ಏಪ್ರಿಲ್ ಒಂದರಿಂದ ಬೇರೆ ಬೇರೆ ಕಛೇರಿಗಳಿಂದ ಸ್ವೀಕೃತಿಯಾದ ಮತ್ತು ರವಾನಿಸಲಾದ ಪತ್ರಗಳ ವಿವರಗಳ ತಖ್ತೆ
26. ಶುದ್ಧ ಪ್ರತಿ ತಖ್ತೆ
27. ಬೆರಳಚ್ಚುಗಾರರ ದಿನವಹಿ
28. ಸ್ಥಳೀಯ ವಿತರಣಾ ರವಾನೆ
29. ಕಛೇರಿ ಆದೇಶ ಪುಸ್ತಕ
30. ಗೃಹ ನಿರ್ಮಾಣ ಮತ್ತು ವಾಹನ ಮುಂಗಡ ಮಂಜೂರಾತಿ ವಹಿ
31. ಶಿಸ್ತು ಪ್ರಕರಣ ನಿಗಾವಹಿ
32. ವೈದ್ಯಕೀಯ ವೆಚ್ಚ ಮರು ಪಾವತಿ ಕಡತ
33. ಕರ್ನಾಟಕ ಸರ್ಕಾರ ಸಾಮೂಹಿಕ ವಿಮಾ ಯೋಜನೆ ವರ್ಗಾವಾರು ವಹಿ
34. ಕಛೇರಿ ಕೈಪಿಡಿಯಲ್ಲಿ ನಿಗದಿಪಡಿಸಿದಂತೆ ಇತರೆ ವಹಿಗಳು
35. ಸಾಮಾನ್ಯ ಭವಿಷ್ಯ ನಿಧಿಯ ಪಾಸ್ ಪುಸ್ತಕ
36. ಸಾಮಾನ್ಯ ನಗದು ಪುಸ್ತಕ
37. ಪಾವತಿ ವಹಿ
38. ನಗಧೀಕರಣ ವಹಿ
39. ವೇತನ ಬಟಾವಡೆ ವಹಿ
40. ಪಾವತಿಯಾಗದ ವೇತನ ವಹಿ
41. ಪ್ರಯಾಣ ಭತ್ಯೆ ನಿಗಾ ವಹಿ
42. ಪ್ರಯಾಣ ಭ ತ್ಯೆ ಬಟವಾಡೆ ವಹಿ
43. ಪ್ರಯಾಣ ಭತ್ಯೆ ಬಿಲ್ಲುಗಳ ಪರಿಶೀಲನಾ ವಹಿ
44. ಸಾದಿಲ್ವಾರು ವೆಚ್ಚ ವಹಿ ವೋಚರಗಳ ಸಂಹಿತೆ
45. ವಿಶೇಷ ವಸೂಲಾತಿಗಳ ವಹಿ
46. ಆ್ಯಡಿಟ್ ನೋಟ್, ರಿಜಾಯಿಂಡರ್, ಪರಿಶೀಲನಾ ಟಿಪ್ಪಣೆಗಳ ನಿಗಾ ವಹಿ
47. ಅಧೀಕ್ಷಕ ಇಂಜನೀಯರವರ ಅನಿರೀಕ್ಷಿತಾ ತಪಾಸಣಾ ಟಿಪ್ಪಣಿ

ಲೆಕ್ಕ ಶಾಖೆ

1. ನಗದು ಪುಸ್ತಕ
2. ಚೆಕ್ ಮೇಮೊ ಪುಸ್ತಕ
3. ಎಲ್ ಓ ಸಿ ರಜಿಸ್ಟರ್
4. ರೆಮಿಟೆನ್ಸ್ ರಜಿಸ್ಟರ್
5. ಚೆಕ್ ರರೇವಡ್ ರಜಿಸ್ಟರ್
6. ಬಿ ಆರ್ ರಜಿಸ್ಟರ್
7. ಭಾಡಿಗೆ ರಜಿಸ್ಟರ್
8. ಡಿಪಾಜಿಟ್ಸ್ ರಜಿಸ್ಟರ್
9. ಎಂ ಪಿ ಡಬ್ಲ್ಯೂ ರಜಿಸ್ಟರ್
10. ಟಿ ಇ ಓ ರಜಿಸ್ಟರ್
11. ವರ್ಕ್ಸ್ ರಜಿಸ್ಟರ್
12. ನಮೂನೆ -೬೧

ಉಗ್ರಾಣ ಶಾಖೆ

1. ದಾಸ್ತಾನು ಸ್ವೀಕೃತಿ ವಹಿ ( ಪಿಡಬ್ಲ್ಯೂಎ-೪)
2. ದಾಸ್ತಾನು ವಿತರಣಾ ವಹಿ (ಪಿಡಬ್ಲ್ಯೂಎ-೪)
3. ದಾಸ್ತಾನು ಖರೀದಿ ಪುಸ್ತಕ

4. ಅರ್ಧ ವಾರ್ಷಿಕ ನಿಯತಕಾಲಿಕ ವಹಿ (ಪಿಡಬ್ಲ್ಯೂಎ-೧೫)
5. ಖಾಲಿ ಸಾಮಗ್ರಿಗಳ (ಖಾಲಿ ಸಿಮೆಂಟ್ ಚೀಲ ಖಾಲಿ ಡಾಂಬರ್ ಬ್ಯಾರಲ್ಲುಗಳ ವಹಿ (ಎಸ್ ಎಂ ಜಿ-೭)
6. ಖಾಲಿ ಅಳತೆ ಪುಸ್ತಕಗಳ ವಹಿ (ಪಿ ಡಬ್ಲ್ಯೂ ಜಿ-೨೮)
7. ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ)
8. ಕಛೇರಿ ಪಿಠೋಪಕರಣಗಳ ವಹಿ (ಕೆ ಎಫ್ ಸಿ –೩೪ ಎ)
9. ಗ್ರಂಥಾಲಯ ಪುಸ್ತಕಗಳ ವಹಿ (ಕೆ ಎಫ್ ಸಿ –೩೬)
10. ಉಪಕರಣ ಮತ್ತು ಸ್ಥಿರ ಯಂತ್ರಗಳ ಸ್ವೀಕೃತಿ ವಹಿ (ಪಿಡಬ್ಲ್ಯೂಎ-೪)
11. ಉಪಕರಣ ಮತ್ತು ಸ್ಥಿರಯಂತ್ರಗಳ ವಿತರಣಾ ವಹಿ (ಪಿಡಬ್ಲ್ಯೂಎ-೪)
12. ಸೆಪ್ಟೆಂಬರ್ ಅಂತ್ಯದ ಉಪಕರಣ ಮತ್ತು ಸ್ಥಿರಯಂತ್ರಗಳ ವಾರ್ಷಿಕ ನಿಯತಕಾಲಿಕೆ (ಪಿಡಬ್ಲ್ಯೂಜಿ-೧೭)
13. ಖಾಲಿ ಎನ್‌ಎಂಆರ್ (ಹಾಜರಿ ಪತ್ರಿಕೆ) ವಹಿ
14. ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ (ಪಿಡಬ್ಲ್ಯೂಜಿ-೨೯)
15. ಇನ್‌ವೆಂಟರಿ ರಜಿಸ್ಟರ್
16. ಎಂಪಿಎಸ್‌ಎಸ್‌ಎ ವಹಿ
17. ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ.

**ಅರೆ ಖಾಯಂ ಮಾಹಿತಿ ಕೈಪಿಡಿ 7 ರಿಂದ 17**

**ಕೈಪಿಡಿ–7**

ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

ಏನು ಇರುವುದಿಲ್ಲ

**ಕೈಪಿಡಿ–8**

ಇಲಾಖೆಯಲ್ಲಿ ನಿಗಮ / ಪರಿಷತ್ತು / ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡುವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ

ಏನು ಇರುವುದಿಲ್ಲ

**ಕೈಪಿಡಿ – 9**

**ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ**

ಈ ಇಲಾಖೆಯಲ್ಲಿ ಕಾರ್ಯನಿರ್ವಾಹಕ ಇಂಜನಿಯರ ಇವರ ಅಧಿಕಾರದ ಬಗ್ಗೆ ಕೈಪಿಡಿ–2 ರಲ್ಲಿ ಈಗಾಗಲೇ ತಿಳಿಸಲಾಗಿದೆ.

ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ ) ಈ ಕೆಳಗೆ ನೀಡಿದೆ.

| ಕ್ರ. ಸಂ. | ಹುದ್ದೆ | ಹೆಸರು |
|---|---|---|
| 1) | ಕಾರ್ಯನಿರ್ವಾಹಕ ಇಂಜನಿಯರ–1 | ಎನ್. ಕೆ. ಹೊಳೆಯಣ್ಣವರ |
| 2) | ತಾಂತ್ರಿಕ ಸಹಾಯಕರು –1 | ಎಂ.ಆರ್.ಸುಬ್ಬಣ್ಣವರ |
| 3) | ಸಹಾಯಕ ಇಂಜನಿಯರರು – 3 | 1) ಕೆ.ಎ.ವಡೆಯರ<br>2) ಡಿ.ಬಿ.ನರೇಂದ್ರ<br>3) ಬಸವರಾಜ.ಎಚ್ |
| 4) | ಕಿರಿಯ ಇಂಜನಿಯರರು – 1 | ಗುರುನಾಥ |
| 5) | ಸಾಂಖಿಕ ನಿರೀಕ್ಷಕರು – 1 | ಆರ್.ಎಂ.ನಿಂಬನಾಯ್ಕರ |
| 6) | ಅಧೀಕ್ಷಕರು – 1 | ಎಂ. ಎನ್. ಸಾಳುಂಕೆ |
| 7) | ಪ್ರಥಮ ದರ್ಜೆ ಸಹಾಯಕರು –1 | ಆರ್. ಎಚ್. ಕರ್ಪೂರ |
| 8) | ದ್ವಿತೀಯ ದರ್ಜೆ ಸಹಾಯಕರು–4 | 1) ಎಫ್.ಜಿ.ಮೇತ್ರಿ<br>2) ಬಿ.ಎನ್.ಚಲವಾದಿ<br>3) ಎಚ್.ವೆಂಕಟೇಶ<br>4) ಎಂ.ಎಲ್.ವಡ್ಡಟ್ಟಿ |
| 9) | ಲೆಕ್ಕಪರಿಶೋಧನಾಧಿಕಾರಿಗಳು – 1 | ಎಲ್. ಛತ್ರಾನಾಯಕ |
| 10) | ಪ್ರಥಮ ದರ್ಜೆ ಲೆಕ್ಕ ಸಹಾಯಕರು – 2 | 1) ಪಿ. ವಿ. ಹಬೀಬ<br>2) ಶ್ರೀಮತಿ ಬಿ.ಎಂ.ಮಮ್ತಾಜಬೇಗಂ |
| 11) | ದ್ವಿತೀಯ ದರ್ಜೆ ಲೆಕ್ಕ ಸಹಾಯಕರು – 2 | 1) ಎ.ಎನ್.ಬಡೇಖಾನ<br>2) ಆರ್.ಎಸ್.ಕುಲಕರ್ಣಿ |
| 12) | ಆಕೃತಿ ರಚನಾಕಾರರು – 1 | ಎಸ್. ವಿ. ಯಂಡಿಗೇರಿ |
| 13) | ಅನುರೇಖಕರು – 1 | ಬಿ. ಟಿ ಬೇಪೂರ |
| 14) | ಶೀಘ್ರಲಿಪಿಗಾರ – 1 | ಆರ್. ಎ. ಕೊತ್ತಲ |
| 15) | ಉಗ್ರಾಣ ಅಧೀಕ್ಷಕರು – 1 | ಎಸ್. ಎಚ್. ವಡಿಯರ |

| ಕ್ರ. ಸಂ. | ಹುದ್ದೆ | ಹೆಸರು |
|---|---|---|
| 16) | ದ್ವಿತೀಯ ದರ್ಜೆ ಉಗ್ರಾಣ ಸಹಾಯಕರು - 1 | ಎಚ್. ಎನ್. ಕುರಿ |
| 17) | ಬೆರಳಚ್ಚುಗಾರರು - 2 | 1) ಎಂ. ಎ. ಮುಲ್ಲಾ<br>2) ಎಂ. ವಿ. ಹೊಂಬಳ |
| 18) | ಅಟೆಂಡರ - 1 | ಶ್ರೀಮತಿ ಬೀಬಿಜಾನ ಢವಳಗಿ |
| 19) | ಜವಾನರು - 3 | 1) ಎಸ್. ಎಸ್. ಜಾಧವ<br>2) ಎಂ. ಎಫ್. ಮಸೂತಿ<br>3) ಎಸ್. ಎಸ್. ಸೈಯದ |
| 20) | ಕಾವಲುಗಾರ - 1 | ಶ್ರೀಮತಿ ರಾಧಾಬಾಯಿ ಕೆ. ಕುಲಕರ್ಣಿ |

**ಕೈಪಿಡಿ - 10**

**ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ತಿಂಗಳ ವೇತನ /ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು**

ಕಾರ್ಯನಿರ್ವಾಹಕ ಇಂಜನಿಯರ ರವರ ಕಚೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತಿದೆ.

| ಕ್ರ ಸಂ | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1) | ಕಾರ್ಯನಿರ್ವಾಹಕ ಇಂಜನಿಯರ-1 | ಎನ್. ಕೆ. ಹೊಳೆಯಣ್ಣವರ | 9580-14200 | 13120 |
| 2) | ತಾಂತ್ರಿಕ ಸಹಾಯಕರು -1 | ಎಂ.ಆರ್.ಸುಬ್ಬಣ್ಣವರ | 7400-13120 | 12800 |
| 3) | ಸಹಾಯಕ ಇಂಜನಿಯರರು - 3 | 1) ಕೆ.ಎ.ವಡೆಯರ<br>2) ಡಿ.ಬಿ.ನರೇಂದ್ರ<br>3) ಬಸವರಾಜ.ಎಚ್ | 6000-11200 | 9840<br>6150<br>6150 |
| 4) | ಕಿರಿಯ ಇಂಜನಿಯರರು - 1 | ಗುರುನಾಥ | 4575-8400 | 5575 |
| 5) | ಸಾಂಖಿಕ ನಿರೀಕ್ಷಕರು - 1 | ಆರ್.ಎಂ.ನಿಂಬನಾಯ್ಕರ | 3850-7050 | 4700 |
| 6) | ಅಧೀಕ್ಷಕರು - 1 | ಎಂ. ಎನ್. ಸಾಳುಂಕೆ | 5200-9580 | 8200 |
| 7) | ಪ್ರಥಮ ದರ್ಜೆ ಸಹಾಯಕರು -1 | ಆರ್. ಎಚ್. ಕರ್ಪೂರ | 3850-7050 | 6150 |
| 8) | ದ್ವಿತೀಯ ದರ್ಜೆ ಸಹಾಯಕರು-4 | 1) ಎಫ್.ಜಿ.ಮೇತ್ರಿ<br>2) ಬಿ.ಎನ್.ಚಲವಾದಿ<br>3) ಎಚ್.ವೆಂಕಟೇಶ<br>4) ಎಂ.ಎಲ್.ವಡ್ಡಟ್ಟಿ | 3000-5450 | 4575<br>4575<br>3650<br>3650 |
| 9) | ಲೆಕ್ಕಪರಿಶೋಧನಾಧಿಕಾರಿಗಳು - 1 | ಎಲ್. ಛತ್ರಾನಾಯಕ | 6000-11200 | 6900 |
| 10) | ಪ್ರಥಮ ದರ್ಜೆ ಲೆಕ್ಕ ಸಹಾಯಕರು-2 | 1) ಪಿ. ವಿ. ಹಬೀಬ<br>2) ಶ್ರೀಮತಿ ಬಿ.ಎಂ. ಮಮ್ತಾಜಬೇಗಂ | 3850-7050 | 4700<br>5575 |
| 11) | ದ್ವಿತೀಯ ದರ್ಜೆ ಲೆಕ್ಕ ಸಹಾಯಕರು-2 | 1) ಎ.ಎನ್.ಬಡೇಖಾನ<br>2) ಆರ್.ಎಸ್.ಕುಲಕರ್ಣಿ | 3000-5450 | 6075<br>4050 |
| 12) | ಆಕೃತಿ ರಚನಾಕಾರರು - 1 | ಎಸ್. ವಿ. ಯಂಡಿಗೇರಿ | 3850-7050 | 6900 |
| 13) | ಅನುರೇಖಕರು - 1 | ಬಿ. ಟಿ ಬೇವೂರ | 3300-6300 | 4950 |
| 14) | ಶೀಘ್ರಲಿಪಿಗಾರ - 1 | ಆರ್. ಎ. ಕೊತ್ತಲ | 3850-7050 | 4950 |
| 15) | ಉಗ್ರಾಣ ಅಧೀಕ್ಷಕರು - 1 | ಎಸ್. ಎಚ್. ವಡಿಯರ | 5200-9580 | 8600 |
| 16) | ದ್ವಿತೀಯ ದರ್ಜೆ ಉಗ್ರಾಣ ಸಹಾಯಕರು-1 | ಎಚ್. ಎನ್. ಕುರಿ | 3000-5450 | 6150 |
| 17) | ಬೆರಳಚ್ಚುಗಾರರು - 2 | 1) ಎಂ. ಎ. ಮುಲ್ಲಾ<br>2) ಎಂ. ವಿ. ಹೊಂಬಳ | 3000-5450 | 4250<br>3650 |
| 18) | ಅಟೆಂಡರ - 1 | ಶ್ರೀಮತಿ ಬೀಬಿಜಾನ ಢವಳಗಿ | 2775-4950 | 2925 |
| 19) | ಜವಾನರು - 3 | 1) ಎಸ್. ಎಸ್. ಜಾಧವ<br>2) ಎಂ. ಎಫ್. ಮಸೂತಿ<br>3) ಎಸ್. ಎಸ್. ಸೈಯದ | 2500-3850 | 3550<br>4575<br>3075 |
| 20) | ಕಾವಲುಗಾರ - 1 | ಶ್ರೀಮತಿ ರಾಧಾಬಾಯಿ ಕೆ. ಕುಲಕರ್ಣಿ | 2500-3850 | 2650 |

**ಕೈಪಿಡಿ - 11**

ಕಾರ್ಯನಿರ್ವಾಹಕ ಇಂಜನಿಯರ ಲೋಇ ಗದಗ ವಿಭಾಗಕ್ಕೆ ಸಂಬಂಧಿಸಿದಂತೆ 2003-04 ರಿಂದ 2005-06 ರ ವರೆಗಿನ ಅನುದಾನ ಮತ್ತು ವೆಚ್ಚವನ್ನು ತೋರಿಸುವ ತಃಖ್ತೆ (ರೂ.ಲಕ್ಷಗಳಲ್ಲಿ)

| ಕ್ರ ಸಂ | ಲೆಕ್ಕ ಶೀರ್ಷಿಕೆ | 2003-04 | | 2004-05 | | 2005-06 | |
|---|---|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ | ಅನುದಾನ | ವೆಚ್ಚ |
| | **5054 ರಸ್ತೆ ಮತ್ತು ಸೇತುವೆ** | | | | | | |
| 1) | 5054-03-337-0-02 ಇತರೆ ರಸ್ತೆಗಳ ನಿರ್ಮಾಣ-2 (ಮುಖ್ಯ ಮಂತ್ರಿಗಳ ಕಾರ್ಯಕ್ರಮ ಪಟ್ಟಿ 37.50 ಕೋಟಿ) | 10.00 | 11.86 | 9.30 | 9.88 | 100.00 | 133.46 |
| 2) | 5054-04-337-1-03, 50ನೇ ವಾರ್ಷಿಕ ಸ್ವಾತಂತ್ರ್ಯದ ನಿಮಿತ್ತ ಸಂಪರ್ಕವಿಲ್ಲದ ಹಳ್ಳಿಗಾಗಿ ರಸ್ತೆಗಳ ನಿರ್ಮಾಣ | - | 0.09 | - | - | - | - |
| | **ಒಟ್ಟು :-** | **10.00** | **11.95** | **9.30** | **9.88** | **100.00** | **133.46** |
| 3) | 5054-04-800-3-01 ನಬಾರ್ಡ ಧನ ಸಹಾಯಕ ರಸ್ತೆ ಕಾಮಗಾರಿಗಳು | 223.00 | 263.63 | 605.96 | 478.56 | 341.40 | 224.11 |
| 4) | 5054-04-800-3-02 ನಬಾರ್ಡ ಧನ ಸಹಾಯಕ ಸೇತುವೆ ಕಾಮಗಾರಿಗಳು | 6.00 | 5.96 | 6.04 | 8.22 | 149.45 | 74.65 |
| | **ಒಟ್ಟು :-** | **229.00** | **269.49** | **612.00** | **486.78** | **490.85** | **298.76** |
| 5) | 5054 ಕೇಂದ್ರ ರಸ್ತೆ ನಿಧಿ | 128.90 | 119.01 | 200.00 | 163.51 | 260.00 | 110.93 |
| | **4059 ಲೋಇ ಕಾಮಗಾರಿಗಳ ಮೇಲಣ ಬಂಡವಾಳ ವೆಚ್ಚ** | | | | | | |
| 6) | 4059-80-051-0-05 ಲೋಇ ಕಾಮಗಾರಿ | 49.50 | 50.20 | 45.50 | 36.60 | 120.50 | 6.26 |
| 7) | 4059-80-051-0-021 ನವೀಕರಣ | - | 0.91 | - | - | - | - |
| | **ಒಟ್ಟು :-** | **49.50** | **51.11** | **45.50** | **36.60** | **120.50** | **6.26** |
| | **4216 ವಸತಿ ಮೇಲಣ ಬಂಡವಾಳ ವೆಚ್ಚ** | | | | | | |
| 8) | 4216-01-700-2-20-386 ಕಟ್ಟಡಗಳ ನವೀಕರಣ | - | 0.92 | - | - | 0.86 | 0.62 |
| 9) | 4216-01-700-2-22 ಹೊಸ ಜಿಲ್ಲೆಗಳ ವಸತಿ ಗೃಹಗಳು | 15.00 | 21.02 | 5.00 | 16.02 | - | 1.29 |
| | **ಒಟ್ಟು :-** | **15.00** | **21.94** | **5.00** | **16.02** | **0.86** | **1.91** |
| | **4202 ಶಿಕ್ಷಣ ಕಲೆ ಮತ್ತು ಸಂಸ್ಕೃತಿ ಮೇಲಣ ಬಂಡವಾಳ ವೆಚ್ಚ** | | | | | | |
| 10) | 4202-01-202-1-01 ಸೆಕೆಂಡರಿ ಶಿಕ್ಷಣ | 12.00 | - | 12.00 | 15.63 | 24.50 | 28.67 |

**ಲೋಕೋಪಯೋಗಿ ಇಲಾಖೆ**

**2005-06 ನೇ ಸಾಲಿನ ಯೋಜನಾ ವೆಚ್ಚದ ಹಂಚಿಕೆ ವಿವರ ( ರೂ. ಲಕ್ಷಗಳಲ್ಲಿ )**

| ಕ್ರ ಸಂ | ಲೆಕ್ಕ ಶೀರ್ಷಿಕೆ | ಲೋಇ ಗದಗ ವಿಭಾಗ |
|---|---|---|
| | **5054 ರಸ್ತೆ ಮತ್ತು ಸೇತುವೆ** | |
| 1) | 5054-03-337-0-02 ಇತರೆ ರಸ್ತೆ ನಿರ್ಮಾಣ | 100.00 |
| | 5054 ನಬಾರ್ಡ ಧನ ಸಹಾಯ ಕಾಮಗಾರಿಗಳು | |
| 1) | 5054-04-800-3-01 ನಬಾರ್ಡ ಧನ ಸಹಾಯ ರಸ್ತೆ ಕಾಮಗಾರಿ | 341.40 |
| 2) | 5054-04-800-3-02ನಬಾರ್ಡ ಧನಸಹಾಯ ಸೇತುವೆ ಕಾಮಗಾರಿ | 149.45 |
| | **ಒಟ್ಟು :-** | **490.85** |
| 1) | 5054 ಕೇಂದ್ರ ರಸ್ತೆ ನಿಧಿ | 260.00 |
| 1) | 4059 ಲೋಇ ಕಾಮಗಾರಿಗಳ ಮೇಲಣ ಬಂ ವೆಚ್ಚ<br>4059-80-051-0-05 ಲೋಇ ಕಾಮಗಾರಿ | 120.50 |
| 1) | 4216 ವಸತಿ ಮೇಲಣ ಬಂಡವಾಳ ವೆಚ್ಚ<br>4216-01-700-2-20-386 ಕಟ್ಟಡಗಳ ನವೀಕರಣ | 0.86 |
| 1) | 4202 ಶಿಕ್ಷಣ ಕಲೆ ಮತ್ತು ಸಂಸ್ಕೃತಿ ಮೇಲಣ ಬಂಡವಾಳ<br>4202-01-202-1-01 ಸೆಕೆಂಡರಿ ಶಿಕ್ಷಣ | 24.50 |

**ಕೈಪಿಡಿ – 12**

**ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು**

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ

**ಕೈಪಿಡಿ – 13**

**ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯತಿ ಪಡೆಯುವವರ ವಿವರ**

ಕಾರ್ಯನಿರ್ವಾಹಕ ಇಂಜನಿಯರರು ಲೋಇ ಗದಗ ವಿಭಾಗ ಗದಗ ವ್ಯಾಪ್ತಿಯಲ್ಲಿ ಯಾವುದೇ ಪರ್ಮಿಟ್ ಅಥವಾ ಅಧಿಕಾರ ಪತ್ರಗಳನ್ನು ನೀಡುತ್ತಿಲ್ಲ.

**ಕೈಪಿಡಿ – 14**

**ಇಲಾಖೆಯಲ್ಲಿರುವ ಮಾಹಿತಿಯನ್ನು ವೆಬ್‌ಸೈಟನಲ್ಲಿ ನೀಡಿರುವ ಬಗ್ಗೆ ವಿವರ**

ಇಲಾಖೆಯಲ್ಲಿ ವೆಬ್ ಸೈಟ ಯಾವುದೂ ಇಲ್ಲ

**ಕೈಪಿಡಿ – 15**

**ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ**

ಸಾರ್ವಜನಿಕರು ಕಾರ್ಯನಿರ್ವಾಹಕ ಇಂಜನಿಯರರು ಲೋಇ ವಿಭಾಗ ಗದಗ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಎಂ. ಅರ್. ಸುಬ್ಬಣ್ಣವರ , ತಾಂತ್ರಿಕ ಸಹಾಯಕರು ಇವರಿಗೆ ಅರ್ಜಿ ನೀಡುವದು ಅಥವಾ ಸಂಪರ್ಕಿಸುವದು.

ಕಚೇರಿಯ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ **ದೂರವಾಣಿ ಸಂಖ್ಯೆ : 08372 – 238782**

**ಫ್ಯಾಕ್ಸ ಸಂಖ್ಯೆ : 08372 – 237268**

ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ – 16**

**ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿವರಗಳು, ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಪದನಾಮ**

ಕಾರ್ಯನಿರ್ವಾಹಕ ಇಂಜನಿಯರರು ಲೋಇ ಗದಗ ವಿಭಾಗ ಗದಗ ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಎಂ. ಅರ್. ಸುಬ್ಬಣ್ಣವರ, ತಾಂತ್ರಿಕ ಸಹಾಯಕರು ಇವರಿಗೆ ಅರ್ಜಿ ನೀಡುವದು ಅಥವಾ ಕಚೇರಿ ವೇಳೆಯಲ್ಲಿ ಸಂಪರ್ಕಿಸುವುದು.

| ಕ್ರ ಸಂ | ಕಚೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ, ಸೆಕ್ಷನ್–5(1) | ಸಾರ್ವಜನಿಕ ಮಾಹಿತಿ ನೀಡುವ ಸಹಾಯಕ ಅಧಿಕಾರಿ, ಸೆಕ್ಷನ್–5(2) | ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳು, ಸೆಕ್ಷನ್–19(1) |
|---|---|---|---|---|
| 1) | ಕಾರ್ಯನಿರ್ವಾಹಕ ಇಂಜನಿಯರರು ಲೋಕೋಪಯೋಗಿ ಇಲಾಖೆ ಗದಗ ವಿಭಾಗ, ಮಹಾವೀರ ವೃತ್ತ ಗದಗ | ತಾಂತ್ರಿಕ ಸಹಾಯಕರು – 1 ಕಾರ್ಯನಿರ್ವಾಹಕ ಇಂಜನಿಯರರು ಲೋಕೋಪಯೋಗಿ ಇಲಾಖೆ ಗದಗ ವಿಭಾಗ ಕಚೇರಿ ಮಹಾವೀರ ವೃತ್ತ ಗದಗ | ಸಹಾಯಕ ಇಂಜನಿಯರರು (ಸೇವೆಯಲ್ಲಿ ಹಿರಿಯರು) ಕಾರ್ಯನಿರ್ವಾಹಕ ಇಂಜನಿಯರರು ಲೋಕೋಪಯೋಗಿ ಇಲಾಖೆ ಗದಗ ವಿಭಾಗ ಕಚೇರಿ ಮಹಾವೀರ ವೃತ್ತ ಗದಗ | ಕಾರ್ಯನಿರ್ವಾಹಕ ಇಂಜನಿಯರರು ಲೋಕೋಪಯೋಗಿ ಇಲಾಖೆ ಗದಗ ವಿಭಾಗ, ಮಹಾವೀರ ವೃತ್ತ ಗದಗ |

**ಕೈಪಿಡಿ – 17**

**ಇತರೆ ವಿವರಗಳು**

ಏನು ಇರುವುದಿಲ್ಲ.

ಮಾಹಿತಿಯನ್ನು ನಿಯಮಗಳಡಿ ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲಾಗಿದೆ.

**ಎನ್.ಕೆ. ಹೊಳೆಯಣ್ಣವರ**

ಪಿ.ಆರ್. 1736

ಕಾರ್ಯನಿರ್ವಾಹಕ ಇಂಜನಿಯರರು

ಲೋಕೋಪಯೋಗಿ ಇಲಾಖೆ ಗದಗ ವಿಭಾಗ ಗದಗ

**ಲೋಕೋಪಯೋಗಿ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ಲೋಇ 275 ಸಿಆರ್‌ಎಂ 06, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡರವರ ಪತ್ರಸಂಖ್ಯೆ:ಸಿಬಿಎನ್:ಹೈಆಸೆ:ಕ.ಸಂ.7:ಸಿಎನ್‌ಹೆಚ್-218: ಉ.ಭಾ.ಅ:06-07:7048 ದಿನಾಂಕ: 2.11.2006ರಲ್ಲಿ ಶಿಫಾರಸ್ಸು ಮಾಡಿರುವಂತೆ ವಿಜಾಪೂರ-ಹುಬ್ಬಳ್ಳಿ ರಾಷ್ಟ್ರೀಯ ಹೆದ್ದಾರಿ-218ರ ಉಳಿಕೆ ಭಾಗ

Abandoned road ಕಿ.ಮೀ.39.65 ರಿಂದ 56.00 ರವರೆಗೆ ಒಟ್ಟು 16.35 ಕಿ.ಮೀ. ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಕೆಳದರ್ಜೆಗೊಳಿಸಿ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸಿಕೊಳ್ಳಲು ಅನುಮೋದಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 1738

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ-07/06-07, ದಿನಾಂಕ: 16ನೇ ಡಿಸೆಂಬರ್ 2006**

| | | |
|---|---|---|
| **ಉಪಸ್ಥಿತರು** | : | ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ |
| **ಪಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ,<br>ಸೊರಬ ವಲಯ, ಸೊರಬ |
| **ಆರೋಪಿಗಳು** | : | ಪತ್ತೆಯಾಗಿರುವುದಿಲ್ಲ. |
| **ಭಾಧ್ಯತೆದಾರರು** | : | ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ:-**

ದಿ: 23-05-2006ರಂದು ವಲಯ ಅರಣ್ಯಾಧಿಕಾರಿ, ಸೊರಬ ವಲಯ, ಸೊರಬ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸೊರಬ ತಾಲ್ಲೂಕು ಚಂದ್ರಗುತ್ತಿ ಹೋಬಳಿ ಈಡೂರು-ಕಂಜಕೊಪ್ಪ ಅರಣ್ಯ ಪ್ರದೇಶದಲ್ಲಿ ರಾತ್ರಿ ಸುಮಾರು 11-00ಗಂಟೆಯ ಸಮಯದಲ್ಲಿ ಸಿಬ್ಬಂದಿಯೊಂದಿಗೆ ವಲಯ ಅರಣ್ಯಾಧಿಕಾರಿ ಗಸ್ತು ಮಾಡುತ್ತಿರುವಾಗ ಮಧ್ಯ ಕಾಡಿನಲ್ಲಿ ಕೊಯ್ತು ಮಾಡುವ ಶಬ್ದ ಕೇಳಿ ಸುತ್ತುವರಿದು ಆಸಾಮಿಗಳನ್ನು ಹಿಡಿಯಲು ಪ್ರಯತ್ನಿಸಿದಾಗ ಆಸಾಮಿಗಳು ಮೋಟಾರ್ ಬೈಕನ್ನು ಏರಿ ಓಡಿಹೋಗಲು ಪ್ರಯತ್ನಿಸಿದಾಗ ಇಲಾಖೆಯವರು ಬೆನ್ನಟ್ಟಿದ್ದರಿಂದ ಮೋಟಾರು ಬೈಕನ್ನು ಸ್ಥಳದಲ್ಲಿ ಕೆಡವಿ ಕತ್ತಲೆಯಲ್ಲಿ ಕಾಡಿನೊಳಗೆ ಓಡಿ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಿ ನೋಡಲಾಗಿ ದ್ವಿಚಕ್ರವಾಹನ ಬಜಾಜ್ ಸಿಟಿ-100 ಬೈಕ್ ಕೆಎ-31-ಕೆ-5035 ಆಗಿದ್ದು, ಛಾಸ್ಸಿಸ್ ನಂ: DUFBLM 54844, ಇಂಜಿನ್ ನಂಬರ್ ಕಾಣಿಸುತ್ತಿಲ್ಲ. ನಂತರ ವಾಹನದ ಹತ್ತಿರ ಬೀಟೆ ತುಂಡು 05=0.834ಎಂ3 ಇದ್ದು, ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಇರಲಿಲ್ಲ. ಹಾಗೂ ಇದನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಬೀಟೆ ತುಂಡನ್ನು ಇಲಾಖಾ ಪರ ಜಪ್ತಿಮಾಡಿ ಪ್ರಥಮ ವರ್ತಮಾನ ವರದಿ, ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಸೊರಬ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 45/06-07 ದಿ:23-05-06ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ನ್ಯಾಯಾಲಯದ ಪತ್ರ ಸಂಖ್ಯೆ:ಬಿ3:ಅಮೊ:ವಾಹನ-07/06-07 ದಿ: 29-05-06ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿರಸಿ ಇವರಿಗೆ ಪತ್ರ ಬರೆದು ಈ ವಾಹನವು ಯಾರ ಹೆಸರಿಗೆ ನೋಂದಣಿಯಾಗಿದೆ ಎನ್ನುವ ಬಗ್ಗೆ ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಅದರಂತೆ ಈ ವಾಹನದ ಬಿ ನಕಲನ್ನು ವಲಯ ಅರಣ್ಯಾಧಿಕಾರಿ, ಸೊರಬ ಇವರು ಪ್ರಾದೇಶಿಕ ಕಛೇರಿಯಿಂದ ಪಡೆದು ಈ ಕಛೇರಿಗೆ ಅವರ ಪತ್ರ ಸಂಖ್ಯೆ: 1072/06-07 ದಿ:14-09-06ರಲ್ಲಿ ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ ಬಿ ಪ್ರತಿಯ ಪ್ರಕಾರ ಈ ವಾಹನವು ಶ್ರೀ ದೇವೇಂದ್ರ ಬಂಗಾರ್‍ಯ ನಾಯ್ಕ, ಚಿತ್ರಳ್ಳಿ, ಉಂಡಳ್ಳಿ ಶಿರಸಿ ಇವರ ಹೆಸರಿಗೆ ನೋಂದಣಿಯಾಗಿರುವುದು ತಿಳಿದುಬಂದಿರುತ್ತದೆ. ಅದರಂತೆ ವಾಹನ ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ಪ್ರಕಾರ ಈ ನ್ಯಾಯಾಲಯದಿಂದ ಬಿ3:ಅಮೊ:ವಾಹನ-7/ 06-07 ದಿ: 04-11-06ರಂದು ಕಾರಣ ಕೇಳಿ ಪತ್ರವನ್ನು ವಲಯ ಅರಣ್ಯಾಧಿಕಾರಿ, ಶಿರಸಿ ಇವರ ಮೂಲಕ ಜಾರಿಮಾಡಿದೆ. ಈ ಪತ್ರ ಜಾರಿ ಮಾಡಿ 30 ದಿನಗಳಾದರೂ ವಾಹನ ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿ ವಾಹನ ಬಿಟ್ಟುಕೊಡಲು ಕೋರಿರುವುದಿಲ್ಲ. ಅಲ್ಲದೇ ಈ ವಾಹನವನ್ನು ಹಾಗೆ ತುಂಬ ಸಮಯ ನಿಲ್ಲಿಸಿದಲ್ಲಿ ವಾಹನದ ಬಿಡಿಭಾಗಗಳು ಹಾಳಾಗಿ ಸರ್ಕಾರಕ್ಕೆ ನಷ್ಟ ಉಂಟಾಗಬಹುದೆಂದು ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 02-12-2006ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ತುಂಡುಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸೊರಬ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ತುಂಡನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷಾಧಾರಗಳನ್ನು ಹಾಜರ್ಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ ತುಂಡನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 05–09–2006ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ: 21–09–06ರಂದು ಗೆಜೆಟ್‌ನಲ್ಲಿ ಹಾಗೂ ದಿ: 23–09–06ರಂದು ಮನೋಭೂಮಿ ಮತ್ತು ದಿ: 27–10–06ರಂದು ಈ ಪತ್ರಿಕೆ ದೈನಿಕ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನುಬದ್ದವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಸೊರಬ ಇವರು ಜಪ್ತು ಮಾಡಿದ ವಾಹನ ಬಜಾಜ್ ಸಿಟಿ–100 ಬೈಕ್ ಕೆಎ–31–ಕೆ–5035 ಮತ್ತು ಈ ವಾಹನದಲ್ಲಿದ್ದ ಬೀಟೆ ತುಂಡು 05=0.834ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:16–12–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್. 1739 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ–11/06–07, ದಿನಾಂಕ:16ನೇ ಡಿಸೆಂಬರ್ 2006**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಶಿಕಾರಿಪುರ ವಲಯ, ಶಿಕಾರಿಪುರ.

**ಆರೋಪಿಗಳು** : ಪತ್ತೆಯಾಗಿರುವುದಿಲ್ಲ.

**ಭಾಧ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:–**

ದಿ: 15–08–2006ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ಪಟ್ಟಣದ ಶಿಕಾರಿಪುರದಿಂದ ಅಂಬ್ಲಿಗೊಳಕ್ಕೆ ಹೋಗುವ ಮುಖ್ಯ ರಸ್ತೆಯ ಸೊಸೈಟಿ ಕೇರಿ ಒಳಗಡೆ ಬೆಳಿಗ್ಗೆ 8–30ರ ಸಮಯದಲ್ಲಿ ರಸ್ತೆಯಲ್ಲಿ ಗಸ್ತು ಮಾಡುತ್ತಿರುವಾಗ ಶಿಕಾರಿಪುರದ ಕಡೆಗೆ ಅತ್ಯಂತ ವೇಗವಾಗಿ ಬರುತ್ತಿದ್ದ ಅಂಬಾಸಿಡರ್ ಕಾರ್ ಕೆಎ–14–ಎಂ–417ನ್ನು ಕಂಡು ಅನುಮಾನದಿಂದ ಸಿಬ್ಬಂದಿಗಳು ಕಾರನ್ನು ನಿಲ್ಲಿಸಲು ಸೂಚಿಸಿರುತ್ತಾರೆ. ಆದರೆ ಸಮವಸ್ತ್ರಧಾರಿಗಳಾದ ಇಲಾಖಾ ಸಿಬ್ಬಂದಿಗಳನ್ನು ಕಾರಿನ ಚಾಲಕ ನೋಡಿ ಕಾರನ್ನು ಅತೀ ವೇಗವಾಗಿ ಮುಂದೆ ಚಲಿಸಿದಾಗ ಇಲಾಖಾ ವಾಹನದಿಂದ ಬೆನ್ನಟ್ಟಿದ್ದಾಗ ಸೊಸೈಟಿ ಕೇರಿಯಲ್ಲಿ ವಾಹನ ನಿಲ್ಲಿಸಿ ವಾಹನದಲ್ಲಿದ್ದ ಇಬ್ಬರು ಆಸಾಮಿಗಳು ಕಾರಿನಿಂದ ಇಳಿದು ಓಡಿಹೋಗಿ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಿ ನೋಡಲಾಗಿ ಈ ವಾಹನದ ಛಾಸ್ಸಿಸ್ ನಂ: 111–646577, ಇಂಜಿನ್ ನಂಬರ್ H3027002 ಆಗಿದ್ದು, ವಾಹನದೊಳಗೆ ಮತ್ತು ಡಿಕ್ಕಿಯೊಳಗೆ ಬೀಟೆ ಸೈಜ್ 45=0.154 ಎಂ3 ಇದ್ದು, ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಇರಲಿಲ್ಲ. ಹಾಗೂ ಇದನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಬೀಟೆ ಸೈಜನ್ನು ಇಲಾಖಾ ಪರ ಜಪ್ತಿಮಾಡಿ ಪ್ರಥಮ ವರ್ತಮಾನ ವರದಿ, ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 69/06–07 ದಿ:15–08–06ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ನ್ಯಾಯಾಲಯದ ಪತ್ರ ಸಂಖ್ಯೆ:ಬಿ3:ಅಮೊ:ವಾಹನ–11/06–07 ದಿ: 18–08–06ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರಿಗೆ ಪತ್ರ ಬರೆದು ಈ ವಾಹನವು ಯಾರ ಹೆಸರಿಗೆ ನೋಂದಣಿಯಾಗಿದೆ ಎನ್ನುವ ಬಗ್ಗೆ ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಆದರೆ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ವಾಹನದ ಆರ್.ಸಿ. ಮಾಲೀಕರಿಗೆ 71(ಬಿ)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಅಲ್ಲದೇ ಈ ವಾಹನವನ್ನು ಹಾಗೆ ತುಂಬ ಸಮಯ ನಿಲ್ಲಿಸಿದಲ್ಲಿ ವಾಹನದ ಬಿಡಿಭಾಗಗಳು ಹಾಳಾಗಿ ಸರ್ಕಾರಕ್ಕೆ ನಷ್ಟ ಉಂಟಾಗುವ ಸಂಭವವಿರುವುದರಿಂದ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 02–12–2006ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ಸೈಜುಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ಸೈಜನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರ್ಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ ತುಂಡನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 05–09–2006ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ: 21–09–06ರಂದು ಗೆಜೆಟ್‌ನಲ್ಲಿ ಹಾಗೂ ದಿ: 23–09–06ರಂದು ಮನೋಭೂಮಿ ಮತ್ತು ದಿ: 27–10–06ರಂದು ಈ ಪತ್ರಿಕೆ ದೈನಿಕ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನುಬದ್ದವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಅಂಬಾಸಿಡರ್ ಕಾರ್ ಕೆಎ–14–ಎಂ–417 (ಛಾಸ್ಸಿಸ್ ನಂ: 111–646577, ಇಂಜಿನ್ ನಂಬರ್ H3027002)ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 45=0.154 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16–12–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 1741

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ–12/06–07, ದಿನಾಂಕ:16ನೇ ಡಿಸೆಂಬರ್ 2006**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಸಾಗರ ವಲಯ, ಸಾಗರ.

**ಆರೋಪಿಗಳು** : ಪತ್ತೆಯಾಗಿರುವುದಿಲ್ಲ.

**ಭಾಧ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:–**

ದಿ: 22–08–2006ರಂದು ಸಾಗರ ವಲಯದ ಹೆಗ್ಗೋಡು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಆವಿನಹಳ್ಳಿ ಹೋಬಳಿ ಗೆಣಸಿನ ಕುಣಿ ಗ್ರಾಮದ ದೋಣಂದೂರು ರಸ್ತೆಯಲ್ಲಿ ರಾತ್ರಿ 8–30ರಿಂದ ಕಾಯುತ್ತಿರುವಾಗ ಸುಮಾರು ರಾತ್ರಿ 10–45ರ ಸಮಯದಲ್ಲಿ ಗೆಣಸಿನಕುಣಿಯಿಂದ ಹುಲಿದೇವರಬನದ ಕಡೆಗೆ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ಬ್ಯಾಟರಿಯ ಬೆಳಕಿನಿಂದ ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿದರು. ಆದರೆ ಇಲಾಖೆಯವರು ವಾಹನದ ಹತ್ತಿರ ಹೋಗುವುದರೊಳಗೆ ವಾಹನದಲ್ಲಿದ್ದ

vi) After selection of candidates, the Chairman of the selection Committee satisfying himself regarding their suitability after getting the required reports from the Police or from other sources, recommend the selected candidate or candidates to the Government for issue of appointment orders.

vii) The Government shall issue appointment orders as recommended by the Chairman of the Selection Committee.

viii) However appointment of a member shall be subject to his/her medical fitness.

ix) If the performance of the Members of State Commission is not satisfactory during the tenure of his/her office, the President of the State Commission may recommend to the State Government for discharge of his/her service after notice to him/her. The State Government on the recommendation so made, shall discharge him/her from the post of Members of the State Commission.

ಈ ಆದೇಶವನ್ನು ಅನುಸರಿಸಿಕೊಂಡು, ರಾಜ್ಯ ಸರ್ಕಾರವು, ಈ ಆದೇಶವನ್ನು ಕರ್ನಾಟಕ ಗ್ರಾಹಕ ಸಂರಕ್ಷಣಾ ನಿಯಮಗಳು ೧೯೮೮ ರ ಒಂದು ಭಾಗವೆಂದು ಘೋಷಿಸುವ ಬಗ್ಗೆ ಕ್ರಮವಹಿಸುವುದು.

ನ್ಯಾಯಮೂರ್ತಿ ಚಂದ್ರಶೇಖರಯ್ಯ
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್.1788

## ಭೂದಾಖಲೆಗಳ ಜಂಟಿನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ

## ನಂ. ತಾಂತ್ರಿಕ (1) ರಾಮನಗರ.ನ.ಮಾ.24/ 2005-06, ದಿನಾಂಕ:23ನೇ ಡಿಸೆಂಬರ್, 2006

ಕರ್ನಾಟಕ ಭೂ ಕಂದಾಯ ಅಧಿನಿಯಮ 148(1) ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ, ಕರ್ನಾಟಕ ಸರ್ಕಾರದ ಅಧಿಸೂಚನೆ ನಂ.ಕಂ.ಇ.134 ಭೂದಾಸ 2005 ಬೆಂಗಳೂರು ದಿನಾಂಕ:28.11.2006 ಮೇರೆಗೆ ನಿರ್ದೇಶಿಸಿದಂತೆ, ಮೈಸೂರು ದಕ್ಷಿಣವಲಯ ನಗರಮಾಪನಾಧಿಕಾರಿಯಾದ ನಾನು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕು, ರಾಮನಗರ ನಗರವ್ಯಾಪ್ತಿಯಲ್ಲಿ ಕೆಳಗಿನ ಅನುಸೂಚಿ (ಷೆಡ್ಯೂಲ್) ಯಲ್ಲಿ ವಿವರಿಸಿರುವ ಆಸ್ತಿಗಳು ರಾಮನಗರ ನಗರ ಪರಿಮಿತಿಯಲ್ಲಿ ನಗರಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆಯಿಲ್ಲದಂತೆ, ಬರುತ್ತವೆ ಎಂದು ಘೋಷಿಸುತ್ತೇನೆ.

ರಾಮನಗರ ನಗರ ಮಾಪನ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರವನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.

2) ವಿಚಾರಣಾಧಿಕಾರಿಗಳು, ನಗರ ಮಾಪನ, ತಂಡ-3, ಕೆ.ಆರ್.ವೃತ್ತ, ಬೆಂಗಳೂರು.

3) ಪೌರಾಯುಕ್ತರು, ರಾಮನಗರ ನಗರ ಸಭೆ, ರಾಮನಗರ ರಾಮನಗರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

### ಅನುಸೂಚಿ (ಷೆಡ್ಯೂಲ್)

### ರಾಮನಗರ ನಗರ ಮಾಪನ ವ್ಯಾಪ್ತಿಗೆ ಒಳಪಡುವ ಗ್ರಾಮದ ಆಸ್ತಿಗಳ ವಿವರ ತೋರಿಸುವ ತಃಖ್ತೆ

### ಜಿಲ್ಲೆ: ಬೆಂಗಳೂರು ಗ್ರಾಮಾಂತರ

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ ಖರಾಬು ನಂಬರ್, | ವಿಸ್ತೀರ್ಣ ಎಕರೆ:ಗುಂಟೆ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ರಾಮನಗರ | ರಾಮನಗರ | ಕಸಬಾ ರಾಮನಗರ | ಸ.ನಂ.1 ರಿಂದ 207 ರವರೆಗೆ<br>ಗ್ರಾಮಠಾಣ, ರಸ್ತೆ ವಗೈರೆ. | 361.24<br>175.13 | ಪೂರ್ತಿ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **536.37** | |
| 2. | ರಾಮನಗರ | ರಾಮನಗರ | ಐಜೂರು | ಸ.ನಂ.1 ರಿಂದ 120 ರವರೆಗೆ<br>ಸ.ನಂ. 123 ರಿಂದ 149ರವರೆಗೆ<br>ಸ.ನಂ.151 ರಿಂದ 154 ರವರೆಗೆ<br>ಸ.ನಂ.160 ಮತ್ತು 161<br>ಗ್ರಾಮಠಾಣೆ ವಗೈರೆ | 575.36<br><br><br><br>57.27 | ಪೈಕಿ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **633.23** | |
| 3. | ರಾಮನಗರ | ರಾಮನಗರ | ಬೋಳಪ್ಪನ ಹಳ್ಳಿ | ಸ.ನಂ.1 ರಿಂದ 8 ರವರೆಗೆ<br>ಸ.ನಂ. 13,14,15,24ರ ಪೈಕಿ<br>ಸ.ನಂ.41 ರಿಂದ 46 ರವರೆಗೆ<br>ಸ.ನಂ.48 ರಿಂದ 56ರವರೆಗೆ<br>ಸ.ನಂ.58 ರಿಂದ 90ರವರೆಗೆ<br>ಸ.ನಂ.93 ಮತ್ತು 104.<br>ಗ್ರಾಮಠಾಣೆ ವಗೈರೆ | 281.29<br><br><br><br>8.09 | ಪೈಕಿ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **289.38** | |

| 1 | 2 | 3 | 4 | 5 | 6 | 7 |
|---|---|---|---|---|---|---|
| 4. | ರಾಮನಗರ | ರಾಮನಗರ | ಬೋಳಪ್ಪನ ಹಳ್ಳಿ ಕೇರಿ | ಸ.ನಂ.1 ರಿಂದ 122 ರವರೆಗೆ<br>ಗ್ರಾಮಠಾಣ ವಗೈರೆ | 224.18<br>19.12 | ಪೂರ್ತಿ ಗ್ರಾಮ |
| | | | | ಒಟ್ಟು ವಿಸ್ತೀರ್ಣ | **243.30** | |
| 5. | ರಾಮನಗರ | ರಾಮನಗರ | ಕೊತ್ತಿಪುರದ ಅಮಾನಿಕೆರೆ | ಸ.ನಂ.2 ರಿಂದ 67 ರವರೆಗೆ<br>ಗ್ರಾಮಠಾಣ ವಗೈರೆ | 133.03<br>14.01 | ಪೂರ್ತಿ ಗ್ರಾಮ |
| | | | | ಒಟ್ಟು ವಿಸ್ತೀರ್ಣ | **147.04** | |
| 6. | ರಾಮನಗರ | ರಾಮನಗರ | ಕೊತ್ತಿಪುರ | ಸ.ನಂ.1 ರಿಂದ 94 ರವರೆಗೆ<br>ಸ.ನಂ. 96 ರಿಂದ 129ರ ವರೆಗೆ<br>ಸ.ನಂ.193 ರಿಂದ 244 ರವರೆಗೆ<br>ಸ.ನಂ.257 ರಿಂದ 264 ರವರೆಗೆ<br>ಸ.ನಂ.267 ರಿಂದ 278ರವರೆಗೆ<br>ಸ.ನಂ.281.<br>ಸ.ನಂ.291 ರಿಂದ 295 ರವರೆಗೆ.<br>ಸ.ನಂ.298, 301, 302, 303<br>ಗ್ರಾಮಠಾಣ ವಗೈರೆ | 894.39<br><br><br>11.23 | ಪೈಕಿ ಗ್ರಾಮ |
| | | | | ಒಟ್ಟು ವಿಸ್ತೀರ್ಣ | **906.22** | |
| 7. | ರಾಮನಗರ | ರಾಮನಗರ | ಬಸವನಪುರ | ಸ.ನಂ.12 ರಿಂದ 34 ರವರೆಗೆ<br>ಸ.ನಂ. 35ರ ಪೈಕಿ 54ರ ಪೈಕಿ, 56ರಪೈಕಿ<br>ಸ.ನಂ.57,58, 59<br>ಸ.ನಂ.74 ರಿಂದ 78ರವರೆಗೆ.<br>ಗ್ರಾಮಠಾಣ ವಗೈರೆ | 164.07<br><br>23.05 | ಪೈಕಿ ಗ್ರಾಮ |
| | | | | ಒಟ್ಟು ವಿಸ್ತೀರ್ಣ | **187.12** | |
| 8. | ರಾಮನಗರ | ರಾಮನಗರ | ವಡೇರಹಳ್ಳಿ | ಸ.ನಂ.1 ರಿಂದ 18 ರವರೆಗೆ<br>ಸ.ನಂ.19ರ ಪೈಕಿ,<br>ಸ.ನಂ.20 ರಿಂದ 161ರವರೆಗೆ ಮತ್ತು<br>ಸ.ನಂ.164.<br>ಗ್ರಾಮಠಾಣ ವಗೈರೆ | 616.13<br><br><br><br>52.14 | ಪೈಕಿ ಗ್ರಾಮ |
| | | | | ಒಟ್ಟು ವಿಸ್ತೀರ್ಣ | **668.27** | |
| 9. | ರಾಮನಗರ | ರಾಮನಗರ | ಹಳ್ಳಿಮಾಳ | ಸ.ನಂ.7 ರಿಂದ 10 ರವರೆಗೆ<br>ಸ.ನಂ.11ರ ಪೈಕಿ, 17ರ ಪೈಕಿ,<br>19ರ ಪೈಕಿ,<br>ಸ.ನಂ.20 ರಿಂದ 65ರವರೆಗೆ,<br>ಸ.ನಂ.66ರ ಪೈಕಿ, 107ರ ಪೈಕಿ,<br>ಸ.ನಂ.108 ರಿಂದ 169ರವರೆಗೆ.<br>ಸ.ನಂ.189 ರಿಂದ 197ರವರೆಗೆ.<br>ಸ.ನಂ.199, 202, 204ರ ಪೈಕಿ.<br>ಸ.ನಂ.205 ರಿಂದ 207ರವರೆಗೆ.<br>ಸ.ನಂ.209 ರಿಂದ 215ರವರೆಗೆ.<br>ಸ.ನಂ.222 ರಿಂದ 226ರವರೆಗೆ.<br>ಗ್ರಾಮಠಾಣ ವಗೈರೆ | 633.21<br><br><br><br><br><br><br><br><br><br><br>38.24 | ಪೈಕಿ ಗ್ರಾಮ |
| | | | | ಒಟ್ಟು ವಿಸ್ತೀರ್ಣ | **672.05** | |
| 10. | ರಾಮನಗರ | ರಾಮನಗರ | ಜೀಗೇನಹಳ್ಳಿ | ಸ.ನಂ.1 ರಿಂದ 93 ರವರೆಗೆ<br>ಸ.ನಂ.101 ರಿಂದ 124 ರವರೆಗೆ<br>ಸ.ನಂ.127 ರಿಂದ 142 ರವರೆಗೆ<br>ಗ್ರಾಮಠಾಣ ವಗೈರೆ | 573.39<br><br><br>36.15 | ಪೈಕಿ ಗ್ರಾಮ |
| | | | | ಒಟ್ಟು ವಿಸ್ತೀರ್ಣ | **610.14** | |
| 11. | ರಾಮನಗರ | ರಾಮನಗರ | ಅರ್ಚಕರ ಹಳ್ಳಿ | ಸ.ನಂ.1 ರಿಂದ 73 ರವರೆಗೆ, 86ರಪೈಕಿ,<br>ಸ.ನಂ. 99 ರಿಂದ 151ರವರೆಗೆ<br>ಸ.ನಂ.154<br>ಗ್ರಾಮಠಾಣ ವಗೈರೆ | 512.11<br><br><br>54.05 | ಪೈಕಿ ಗ್ರಾಮ |
| | | | | ಒಟ್ಟು ವಿಸ್ತೀರ್ಣ | **566.16** | |

| 1 | 2 | 3 | 4 | 5 | 6 | 7 |
|---|---|---|---|---|---|---|
| 12. | ರಾಮನಗರ | ರಾಮನಗರ | ಬಿಳಿಗುಂಬ | ಸ.ನಂ.73, ಸ.ನಂ.74ರ ಪೈಕಿ<br>ಸ.ನಂ.75 ರಿಂದ 77ರವರೆಗೆ<br>ಸ.ನಂ.230 ರಿಂದ 233 ರವರೆಗೆ<br>ಸ.ನಂ.273 ರಿಂದ 286ರವರೆಗೆ<br>ಗ್ರಾಮಠಾಣ ವಗೈರೆ | 263.35<br><br><br><br>1.00 | ಪೈಕಿ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **264.35** | |
| 13. | ರಾಮನಗರ | ಕೈಲಂಚ | ಚನಮಾನಹಳ್ಳಿ | ಸ.ನಂ.1 ರಿಂದ 171 ರವರೆಗೆ<br>ಗ್ರಾಮಠಾಣ ವಗೈರೆ | 474.04<br>50.31 | ಪೂರ್ತಿ<br>ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **524.35** | |
| 14. | ರಾಮನಗರ | ಕೈಲಂಚ | ಅಚ್ಚಲು | ಸ.ನಂ.86 ರಿಂದ 107 ರವರೆಗೆ<br>ಸ.ನಂ.130<br>ರಸ್ತೆ ವಗೈರೆ (ಗ್ರಾಮಠಾಣ ಇಲ್ಲ) | 142.03<br><br>9.19 | ಪೈಕಿ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **151.22** | |
| 15. | ರಾಮನಗರ | ಕೈಲಂಚ | ಶಿಡ್ಲಕಲ್ಲು | ಸ.ನಂ.1 ರಿಂದ 26 ರವರೆಗೆ<br>ಸ.ನಂ.99 ರಿಂದ 110 ರವರೆಗೆ<br>ಸ.ನಂ.134, 137.<br>ರಸ್ತೆ ವಗೈರೆ | 120.15<br><br><br>2.23 | ಪೈಕಿ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **122.38** | |
| 16. | ರಾಮನಗರ | ಕೈಲಂಚ | ಕುಂಭಾಪುರ | ಸ.ನಂ.1,2ರ ಪೈಕಿ, 3ರಪೈಕಿ,<br>4ರಪೈಕಿ, 5,6,<br>ಸ.ನಂ. 9 ರಿಂದ 12ರವರೆಗೆ<br>ಸ.ನಂ.16 ರಿಂದ 32 ರವರೆಗೆ<br>ಸ.ನಂ.39.<br>ಸ.ನಂ.42 ರಿಂದ 46ರವರೆಗೆ<br>ಗ್ರಾಮಠಾಣ ವಗೈರೆ | 88.13<br><br><br><br><br><br>11.04 | ಪೈಕಿ ಗ್ರಾಮ |
| | | | | **ಒಟ್ಟು ವಿಸ್ತೀರ್ಣ** | **99.17** | |
| | | | | **ಕ್ರ.ಸಂ.1 ರಿಂದ 16ರವರೆಗಿನ ವಿಸ್ತೀರ್ಣ:** | **6060.30** | |
| | | | | **ಕ್ರ.ಸಂ.1 ರಿಂದ 16ರವರೆಗಿನ ಗ್ರಾಮಠಾಣ, ರಸ್ತೆ, ವಗೈರೆ ವಿಸ್ತೀರ್ಣ:** | **565.25** | |
| | | | | **ಒಟ್ಟು ವಿಸ್ತೀರ್ಣ** | **6626.15** | |

**ಎಂ. ಶಿವಮಾದಯ್ಯ**

ಭೂದಾಖಲೆಗಳ ಜಂಟಿ ನಿರ್ದೇಶಕರು,

ನಗರಮಾಪನ, ದಕ್ಷಿಣ ವಲಯ, ಮೈಸೂರು.

## ಭೂದಾಖಲೆಗಳ ಜಂಟಿನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ

**ನಂ. ತಾಂತ್ರಿಕ (1) ಚಳ್ಳಕೆರೆ. ನಗರಮಾಪನ.24/ 2005-06, ದಿನಾಂಕ:23ನೇ ಡಿಸೆಂಬರ್, 2006**

ಕರ್ನಾಟಕ ಭೂ ಕಂದಾಯ ಅಧಿನಿಯಮ 148(1) ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ, ಕರ್ನಾಟಕ ಸರ್ಕಾರದ ಅಧಿಸೂಚನೆ ನಂ.ಕಂ.ಇ.134 ಭೂದಾಸ 2005 ಬೆಂಗಳೂರು ದಿನಾಂಕ:28.11.2006 ಮೇರೆಗೆ ನಿರ್ದೇಶಿಸಿದಂತೆ, ಮೈಸೂರು ದಕ್ಷಿಣವಲಯ ನಗರಮಾಪನಾಧಿಕಾರಿಯಾದ ನಾನು, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ಚಳ್ಳಕೆರೆ ಪಟ್ಟಣ ವ್ಯಾಪ್ತಿಯಲ್ಲಿ ಕೆಳಗಿನ ಅನುಸೂಚಿ (ಷೆಡ್ಯೂಲ್) ಯಲ್ಲಿ ವಿವರಿಸಿರುವ ಆಸ್ತಿಗಳು ಚಳ್ಳಕೆರೆ ನಗರ ಪರಿಮಿತಿಯಲ್ಲಿ ನಗರಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆಯಿಲ್ಲದಂತೆ, ಬರುತ್ತವೆ ಎಂದು ಘೋಷಿಸುತ್ತೇನೆ.

ಚಳ್ಳಕೆರೆ ಪಟ್ಟಣ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರವನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ನಜರ್‌ಬಾದ್, ಮೈಸೂರು.

2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ "ಜಿಲ್ಲಾ ನಗರಮಾಪನ ಅಧಿಕಾರಿಗಳು, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ."

3) ಮುಖ್ಯಾಧಿಕಾರಿಗಳು, ಪುರಸಭಾ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ.

**ಅನುಸೂಚಿ (ಷೆಡ್ಯೂಲ್)**
**ಚಳ್ಳಕೆರೆ ನಗರಮಾಪನ ವ್ಯಾಪ್ತಿಗೆ ಒಳಪಡುವ ಗ್ರಾಮದ ಆಸ್ತಿಗಳ ವಿವರ ತೋರಿಸುವ ತಃಖ್ತೆ**
**ಜಿಲ್ಲೆ: ಚಿತ್ರದುರ್ಗ**

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ ಖರಾಬು ನಂಬರುಗಳು, ಗ್ರಾಮದ ನಿವೇಶನಗಳು, ಸರ್ಕಾರಿ ಬಂಜರು ನಂಬರುಗಳು | ವಿಸ್ತೀರ್ಣ ಎಕರೆ:ಗುಂಟೆ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಚಳ್ಳಕೆರೆ | ಕಸಬಾ | ಚಳ್ಳಕೆರೆ | ಸ.ನಂ.1 ರಿಂದ 134 ರವರೆಗೆ<br>ಸ.ನಂ.140,<br>ಸ.ನಂ.143 ರಿಂದ 250 ರವರೆಗೆ<br>ಸ.ನಂ.267 ರಿಂದ 297 ರವರೆಗೆ<br>ಸ.ನಂ.300 ರಿಂದ 341 ರವರೆಗೆ<br>ಸ.ನಂ.356 ರಿಂದ 737 ರವರೆಗೆ<br>(ಒಟ್ಟು 698 ಸರ್ವೆ ನಂಬರುಗಳು) | 7622.2$^1/_2$ | |
| 2. | ಚಳ್ಳಕೆರೆ | ಕಸಬಾ | ಚಳ್ಳಕೆರೆ | ಊರು ವಗ್ಗೈರೆ | 0255.15 | |
| 3. | ಚಳ್ಳಕೆರೆ | ಕಸಬಾ | ಗೊರ್ಲಕಟ್ಟೆ | ಸ.ನಂ.58 ಮತ್ತು 59<br>(ಎರಡು ಸರ್ವೆ ನಂಬರುಗಳು) | 0041.10 | |
| 4. | ಚಳ್ಳಕೆರೆ | ಕಸಬಾ | ನಗರಂಗೆರೆ | ಸ.ನಂ.39 ರಿಂದ 51ರವರೆಗೆ<br>ಸ.ನಂ.137 ರಿಂದ 151, ರವರೆಗೆ.<br>ಸ.ನಂ.175 ರಿಂದ 191 ರವರೆಗೆ.<br>ಸ.ನಂ.196 ರಿಂದ 198ರವರೆಗೆ.<br>(ಒಟ್ಟು 48 ಸರ್ವೆ ನಂಬರುಗಳು)<br>ಒಟ್ಟು 748 ಸರ್ವೆ ನಂಬರುಗಳು. | 1067.17 | |
| | | | | **ಒಟ್ಟು ವಿಸ್ತೀರ್ಣ** | **8986.4$^1/_2$** | |

**ಎಂ. ಶಿವಮಾದಯ್ಯ**
ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರಮಾಪನ, ದಕ್ಷಿಣ ವಲಯ, ಮೈಸೂರು.

**ಭೂದಾಖಲೆಗಳ ಜಂಟಿನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ**
**ನಂ. ತಾಂತ್ರಿಕ (1) ನ.ಕಾ.ಹ. ಗ್ರಾಮಠಾಣಾ. ನ.ಮಾ.24/ 2005-06, ದಿನಾಂಕ:23ನೇ ಡಿಸೆಂಬರ್, 2006**

ಕರ್ನಾಟಕ ಭೂ ಕಂದಾಯ ಅಧಿನಿಯಮ 148(1) ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ, ಕರ್ನಾಟಕ ಸರ್ಕಾರದ ಅಧಿಸೂಚನೆ ನಂ.ಕಂ.ಇ.134 ಭೂದಾಸ 2005 ಬೆಂಗಳೂರು ದಿನಾಂಕ:28.11.2006 ಮೇರೆಗೆ ನಿರ್ದೇಶಿಸಿದಂತೆ, ಮೈಸೂರು ದಕ್ಷಿಣವಲಯ ನಗರಮಾಪನಾಧಿಕಾರಿಯಾದ ನಾನು, ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು, ನಲ್ಲೆಕಾಮನಹಳ್ಳೀ ಗ್ರಾಮಠಾಣಾ ವ್ಯಾಪ್ತಿಯಲ್ಲಿ ಕೆಳಗಿನ ಅನುಸೂಚಿ (ಷೆಡ್ಯೂಲ್) ಯಲ್ಲಿ ವಿವರಿಸಿರುವ ಆಸ್ತಿಗಳು ನಲ್ಲೆಕಾಮನಹಳ್ಳಿ ನಗರ ಪರಿಮಿತಿಯಲ್ಲಿ ನಗರಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆಯಿಲ್ಲದಂತೆ, ಬರುತ್ತವೆ ಎಂದು ಘೋಷಿಸುತ್ತೇನೆ.

ನಲ್ಲೆಕಾಮನಹಳ್ಳಿ ಗ್ರಾಮಠಾಣಾ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರವನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.
2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಜಿಲ್ಲಾ ನಗರಮಾಪನ ಅಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.
3) ಕಾರ್ಯದರ್ಶಿಗಳು, ಗ್ರಾಮಪಂಚಾಯತ್ ಕಾರ್ಯಾಲಯ, ಮಿಡಗೇಶಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ.

**ಅನುಸೂಚಿ (ಷೆಡ್ಯೂಲ್)**
**ನಲ್ಲೆಕಾಮನಹಳ್ಳಿ ಗ್ರಾಮಠಾಣಾ ನಗರಮಾಪನ ವ್ಯಾಪ್ತಿಗೆ ಒಳಪಡುವ ಗ್ರಾಮದ ಆಸ್ತಿಗಳ ವಿವರ ತೋರಿಸುವ ತಃಖ್ತೆ**
**ಜಿಲ್ಲೆ: ತುಮಕೂರು**

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ ಖರಾಬು ನಂಬರ್, | ವಿಸ್ತೀರ್ಣ ಎಕರೆ:ಗುಂಟೆ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಮಧುಗಿರಿ | ಮಿಡಗೇಶಿ | ನಲ್ಲೇಕಾಮನಹಳ್ಳಿ | ಸರ್ವೆ ನಂಬರ್:$^1/_2$, 91/8, 91/9, 92/2ಎ ಪೈಕಿ, 92/2ಬಿ, 103/7ಪೈಕಿ, 103/8. | 3.26 | |
| | | | | ಗ್ರಾಮಠಾಣ: | 7.39 | |
| | | | ನಲ್ಲೆಕಾಮನಹಳ್ಳಿ (ಮಜರೆಲಕ್ಷ್ಮಿ ಹಟ್ಟಿ) | ಸರ್ವೆ ನಂಬರ್: 20/1,2,3, 20/4 ಪೈಕಿ, 20/5, 20/6 ಮತ್ತು 12,20/7, 22/3 ಪೈಕಿ, 23ಪೈಕಿ, 114, 115 | 13.33 | |
| 2. | ಮಧುಗಿರಿ | ಮಿಡಗೇಶಿ | ಬೇಡತ್ತೂರು | ಸರ್ವೆನಂಬರ್: 135/ 4ಪೈಕಿ 136. | 5.30 | |
| | | | | **(ಕ್ರ.ಸಂ.(1) ರಿಂದ (2) ರವರೆಗಿನ ವಿಸ್ತೀರ್ಣ ಒಟ್ಟು ವಿಸ್ತೀರ್ಣ** | **31.08** | |

**ಎಂ. ಶಿವಮಾದಯ್ಯ**
ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರಮಾಪನ, ದಕ್ಷಿಣ ವಲಯ, ಮೈಸೂರು.

## ಭೂದಾಖಲೆಗಳ ಜಂಟಿನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ
## ನಂ. ತಾಂತ್ರಿಕ (1) ಯಲ್ದೂರು ಗ್ರಾಮಠಾಣಾ. ನ.ಮಾ.24/ 2005-06, ದಿನಾಂಕ:23ನೇ ಡಿಸೆಂಬರ್, 2006

ಕರ್ನಾಟಕ ಭೂ ಕಂದಾಯ ಅಧಿನಿಯಮ 148(1) ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ, ಕರ್ನಾಟಕ ಸರ್ಕಾರದ ಅಧಿಸೂಚನೆ ನಂ.ಕಂ.ಇ.134 ಭೂದಾಸ 2005 ಬೆಂಗಳೂರು ದಿನಾಂಕ:28.11.2006 ಮೇರೆಗೆ ನಿರ್ದೇಶಿಸಿದಂತೆ, ಮೈಸೂರು ದಕ್ಷಿಣವಲಯ ನಗರಮಾಪನಾಧಿಕಾರಿಯಾದ ನಾನು, ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು, ಯಲ್ದೂರು ಗ್ರಾಮಠಾಣಾ ವ್ಯಾಪ್ತಿಯಲ್ಲಿ ಕೆಳಗಿನ ಅನುಸೂಚಿ (ಷೆಡ್ಯೂಲ್) ಯಲ್ಲಿ ವಿವರಿಸಿರುವ ಆಸ್ತಿಗಳು ಯಲ್ದೂರು ಗ್ರಾಮಠಾಣಾ ಪರಿಮಿತಿಯಲ್ಲಿ ನಗರಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆಯಿಲ್ಲದಂತೆ, ಬರುತ್ತವೆ ಎಂದು ಘೋಷಿಸುತ್ತೇನೆ.

ಯಲ್ದೂರು ಗ್ರಾಮಠಾಣಾ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರವನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.
2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ "ಜಿಲ್ಲಾ ನಗರಮಾಪನ ಅಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ".
3) ಕಾರ್ಯದರ್ಶಿಗಳು, ಗ್ರಾಮಪಂಚಾಯತ್ ಕಾರ್ಯಾಲಯ, ಯಲ್ದೂರು, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ.

**ಅನುಸೂಚಿ (ಷೆಡ್ಯೂಲ್)**
**ಯಲ್ದೂರು ಗ್ರಾಮಠಾಣಾ ನಗರಮಾಪನ ವ್ಯಾಪ್ತಿಗೆ ಒಳಪಡುವ ಗ್ರಾಮದ ಆಸ್ತಿಗಳ ವಿವರ ತೋರಿಸುವ ತಃಖ್ತೆ**
**ಜಿಲ್ಲೆ: ಕೋಲಾರ**

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ ಖರಾಬು ನಂಬರುಗಳು, ಗ್ರಾಮದ ನಿವೇಶನಗಳು, ಸರ್ಕಾರಿ ಬಂಜರು ಜಮೀನು | ವಿಸ್ತೀರ್ಣ ಎಕರೆ:ಗುಂಟೆ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಶ್ರೀನಿವಾಸಪುರ | ಯಲ್ದೂರು | ಯಲ್ದೂರು | ಸರ್ವೆ ನಂಬರ್: 1,87, 100, 101, 102, 107,116, 117, 119, 120 ರಿಂದ 127, 130, 323, 326, 327, 328, 329, 332, 345, 348,349,350,353, 358, 380, 381, 382,384, 387, 486. | 94.10 $^1/_2$ | |
| | | | | **ಗ್ರಾಮಠಾಣ:** | **32.22** | |
| | | | | **ಒಟ್ಟು ವಿಸ್ತೀರ್ಣ:** | **126.32$^1/_2$** | |

**ಎಂ. ಶಿವಮಾದಯ್ಯ**
ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರಮಾಪನ, ದಕ್ಷಿಣ ವಲಯ, ಮೈಸೂರು.

## ಭೂದಾಖಲೆಗಳ ಜಂಟಿನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ
## ನಂ. ತಾಂತ್ರಿಕ (1) ಚಿ.ಜೋ. ಗ್ರಾಮಠಾಣಾ. ನ.ಮಾ.24/ 2005-06, ದಿನಾಂಕ:23ನೇ ಡಿಸೆಂಬರ್, 2006

ಕರ್ನಾಟಕ ಭೂ ಕಂದಾಯ ಅಧಿನಿಯಮ 148(1) ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ, ಕರ್ನಾಟಕ ಸರ್ಕಾರದ ಅಧಿಸೂಚನೆ ನಂ.ಕಂ.ಇ.134 ಭೂದಾಸ 2005 ಬೆಂಗಳೂರು ದಿನಾಂಕ:28.11.2006 ಮೇರೆಗೆ ನಿರ್ದೇಶಿಸಿದಂತೆ, ಮೈಸೂರು ದಕ್ಷಿಣವಲಯ ನಗರಮಾಪನಾಧಿಕಾರಿಯಾದ ನಾನು, ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಚಿಕ್ಕಜೋಗಿಹಳ್ಳೀ ಗ್ರಾಮಠಾಣಾ ವ್ಯಾಪ್ತಿಯಲ್ಲಿ ಕೆಳಗಿನ ಅನುಸೂಚಿ (ಷೆಡ್ಯೂಲ್) ಯಲ್ಲಿ ವಿವರಿಸಿರುವ ಆಸ್ತಿಗಳು ಚಿಕ್ಕಜೋಗಿಹಳ್ಳಿ ನಗರ ಪರಿಮಿತಿಯಲ್ಲಿ ನಗರಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆಯಿಲ್ಲದಂತೆ, ಬರುತ್ತವೆ ಎಂದು ಘೋಷಿಸುತ್ತೇನೆ.

ಚಿಕ್ಕಜೋಗಿಹಳ್ಳಿ ಗ್ರಾಮಠಾಣಾ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರವನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.
2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ "ಜಿಲ್ಲಾ ನಗರಮಾಪನ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ".
3) ಕಾರ್ಯದರ್ಶಿಗಳು, ಗ್ರಾಮಪಂಚಾಯತ್ ಕಾರ್ಯಾಲಯ, ಚುರ್ಚುಗುಂಡಿ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಅನುಸೂಚಿ (ಷೆಡ್ಯೂಲ್)**
**ಚಿಕ್ಕಜೋಗಿಹಳ್ಳಿ ಗ್ರಾಮಠಾಣಾ ನಗರಮಾಪನ ವ್ಯಾಪ್ತಿಗೆ ಒಳಪಡುವ ಗ್ರಾಮದ ಆಸ್ತಿಗಳ ವಿವರ ತೋರಿಸುವ ತಃಖ್ತೆ**
**ಜಿಲ್ಲೆ: ಶಿವಮೊಗ್ಗ**

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ನಂಬರ್, ರಸ್ತೆ ಖರಾಬು ನಂಬರುಗಳು, ಗ್ರಾಮದ ನಿವೇಶನಗಳು, ಸರ್ಕಾರಿ ಬಂಜರು ಜಮೀನು | ವಿಸ್ತೀರ್ಣ ಎಕರೆ:ಗುಂಟೆ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಶಿಕಾರಿಪುರ | ಅಂಜನಾಪುರ | ಚಿಕ್ಕಜೋಗಿಹಳ್ಳಿ | 6,8,9,10,11,12,13,48,49,52, 53,54,55, 56,57, 59 ಪೈಕಿ. | 139.35 | |
| | | | | **ಗ್ರಾಮಠಾಣ:** | **8.38** | |
| | | | | **ಒಟ್ಟು ವಿಸ್ತೀರ್ಣ:** | **148.33** | |

**ಎಂ. ಶಿವಮಾದಯ್ಯ**
ಪಿ.ಆರ್.1774
ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರಮಾಪನ, ದಕ್ಷಿಣ ವಲಯ, ಮೈಸೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ ಕಾರ್ಯಾಲಯ

### ನಂ. ಡಿಆರ್/ಡಿವಿಜಿ/ ಎಲ್‌ಕ್ಯೂಡಿ/ 34/ 2006-07, ದಿನಾಂಕ:22ನೇ ಡಿಸೆಂಬರ್, 2006

**ವಿಷಯ:** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹಾಲೇಹಳ್ಳಿ ಜಗಳೂರು 08, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪ್ರಸ್ತಾವನೆ ದಿನಾಂಕ:26.08.2006.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:12.09.2006.
3) ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ಇವರ ಪತ್ರ ದಿನಾಂಕ:25.11.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ಇವರು ಸಂಘದ ನಿರ್ದೇಶಕರಿಗೆ ಜಾರಿಮಾಡಿಸಿ ಸ್ವೀಕೃತಿ ವರದಿಯನ್ನು ಉಲ್ಲೇಖ(3)ರ ರೀತ್ಯಾ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವು ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಮಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001. ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹಾಲೇಹಳ್ಳಿ ಜಗಳೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:22.12.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್.1776 ದಾವಣಗೆರೆ ಜಿಲ್ಲೆ, ದಾವಣಗೆರೆ.

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ ಕಾರ್ಯಾಲಯ

### ನಂ. ಡಿಆರ್/ಡಿವಿಜಿ/ ಎಲ್‌ಕ್ಯೂಡಿ/ 37/ 2006-07, ದಿನಾಂಕ:22ನೇ ಡಿಸೆಂಬರ್, 2006

**ವಿಷಯ:** ಸ್ಥಗಿತಗೊಂಡಿರುವ ಶ್ರೀ ಪದ್ಮಾಂಬ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಿಳಿಚೋಡು ಜಗಳೂರು, 08, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪ್ರಸ್ತಾವನೆ ದಿನಾಂಕ:26.08.2006 ಮತ್ತು ದಿನಾಂಕ:31.10.2006
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ:12.09.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಸಂಘದ ನಿರ್ದೇಶಕರಿಗೆ ಜಾರಿ ಮಾಡಿಸಿ ಸ್ವೀಕೃತಿ ವರದಿಯನ್ನು ಉಲ್ಲೇಖ (1)ರ ಪತ್ರ ದಿನಾಂಕ:31.10.2006 ರೀತ್ಯಾ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವು ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಮಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001. ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಶ್ರೀ ಪದ್ಮಾಂಬ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಬಿಳಿಚೋಡು, ಜಗಳೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:22.12.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್.1777 ದಾವಣಗೆರೆ ಜಿಲ್ಲೆ, ದಾವಣಗೆರೆ.

## ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಕಛೇರಿ (ಆಡಳಿತ) ಡಿ.ವಿ.ಒ. ಮಲೆನಾಡು ವಿಭಾಗ ಶಿವಮೊಗ್ಗ

**ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಕಾಯ್ದೆಯ ನಿಯಮ 157 (g) ರ ಮೇರೆಗೆ ಅಧಿಸೂಚನೆ**

**ಕ್ರ.ಸಂ.ವಾ.ತೆ.ಜಂ.ಆ.(ಆ)/ಮ.ವಿ./ಶಿ./ಕಾ-2/ಪ್ರ-1/2006-07, ದಿನಾಂಕ: 10ನೇ ಅಕ್ಟೋಬರ್ 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಮೆ: ವಿಶಾಲ್ ಬೆಟಲ್ ನಟ್ ಟ್ರೇಡರ್ಸ್ ಎ.ಪಿ.ಎಮ್.ಸಿ. ಯಾರ್ಡ್ ಶಿವಮೊಗ್ಗ, ಇವರು ಟಿನ್ ಸಂ.29180000398 ಹೊಂದಿದ್ದು ಅವರಿಗೆ ಅಡಿಕೆ ಸರಕಿನ ವ್ಯವಹಾರಕ್ಕಾಗಿ ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಕಾಯ್ದೆ ಅಡಿ ನೀಡಲಾದ ಶಾಸನಬದ್ಧ ನಮೂನೆ VAT-505 ನ ಕ್ರಮ ಸಂ. 1941879 ಯು ತ್ರಿಪ್ರತಿಯಲ್ಲಿ ದಿನಾಂಕ 6.9.2006 ರಂದು ಕಳೆದು ಹೋಗಿರುವುದಾಗಿ ತಿಳಿಸಿರುತ್ತಾರೆ.

ಯಾವುದೇ ವ್ಯಕ್ತಿ/ವರ್ತಕರಿಗೆ ಸದರಿ ಶಾಸನ ಬದ್ಧ ನಮೂನೆಯು ದೊರೆತು ಅದನ್ನು ಉಪಯೋಗಿಸಿದಲ್ಲಿ ಕಾನೂನು ವಿರುದ್ಧವಾಗಿರುವುದರಿಂದ ದಂಡ/ಶಿಕ್ಷೆಗೆ ಒಳಪಡಬೇಕಾಗುತ್ತದೆ. ಆದ್ದರಿಂದ ಸದರಿ ಶಾಸನ ಬದ್ಧ ನಮೂನೆ VAT 505 ಯಾರಿಗಾದರೂ ದೊರೆತಲ್ಲಿ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ) ಡಿ.ವಿ.ಒ. ಮಲೆನಾಡು ವಿಭಾಗ ಶಿವಮೊಗ್ಗ ಅವರಿಗೆ ಹಿಂತಿರುಗಿಸಲು ದೂರವಾಣಿ 08182 271461 ರ ಮೂಲಕ ಸಂಪರ್ಕಿಸಲು ಕೋರಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1701

**ಜಿ. ದಯಾನಂದ**

ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, (ಆಡಳಿತ) ಡಿ.ವಿ.ಒ. ಶಿವಮೊಗ್ಗ

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು

**ನಮೂನೆ-27**

**ಸಂಖ್ಯೆ: 94ಸಿ.ಸಿಆರ್:8:2006-2007, ದಿನಾಂಕ: 7ನೇ ಡಿಸೆಂಬರ್ 2006**

ಕರ್ನಾಟಕ ಭೂ ಕಂದಾಯದ ಕಾಯ್ದೆ 1964ರ ಕಲಂ 68(1) ಮತ್ತು ಕರ್ನಾಟಕ ಭೂ ಕಂದಾಯದ ನಿಯಮಗಳು 1966ರ ನಿಯಮ 94ರ ಮೇರೆಗೆ ಹೊರಡಿಸಿರುವ ಘೋಷಣೆ ಈ ಕೆಳಗೆ ಪರಿಶಿಷ್ಟದಲ್ಲಿ ವಿವರಿಸಿರುವ ಸರ್ಕಾರದ ಜಮೀನಾದ ಸರ್ಕಾರಿ ಗುಂಡು ತೋಪು, ಗುಂಡು ತೋಪು, ಸರ್ಕಾರಿ ಖರಾಬು, ಕುಂಟೆ, ದಾಸಿಕುಂಟೆ, ಜೋಗಿ ಕೆರೆ, ಖರಾಬು ತೋಪು, ನಂಜೇಗೌಡನಕಟ್ಟೆ (ಗೋಕಟ್ಟೆ) ಮುಂತಾದ ಜಮೀನುಗಳು ಈ ಮೊದಲು ಸಾರ್ವಜನಿಕರ ಹಿತದೃಷ್ಟಿಯಿಂದ ಕಾದಿರಿಸಿರುವುದನ್ನು ಇನ್ನು ಮುಂದೆ ಸಾರ್ವಜನಿಕರ ಉಪಯೋಗಕ್ಕಾಗಿ ಅಗತ್ಯವಿರುವುದಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾಗಿರುತ್ತೆ.

1) ಆದ್ದರಿಂದ ಈಗ ಕರ್ನಾಟಕ ಭೂ ಕಂದಾಯದ ಕಾಯ್ದೆ 1964ರ ಕಲಂ 68(1) ರಂತೆ ಪ್ರದತ್ತವಾದ ಧಿಕಾರದಂತೆ ಅಧಿಕಾರವನ್ನು ಚಲಾಯಿಸಿ ಈ ಕೆಳಗಿನ ಪರಿಶಿಷ್ಟದಲ್ಲಿ ವಿವರಿಸಿರುವ ಜಮೀನುಗಳು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯತೆ ಇರುವುದಿಲ್ಲವೆಂದು ಸದರಿ ಸರ್ಕಾರಿ ಜಮೀನುಗಳ ಮೇಲಾಗಲೀ ಅಥವಾ ಭಾಗಶಃವಾಗಲೀ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಸಂಘ ಸಂಸ್ಥೆಗಳ ಹಕ್ಕುಗಳ ಕೊನೆಗೊಳ್ಳತಕ್ಕದೆಂದು ಮೂಲಕ ಘೋಷಿಸಲಾಗಿದೆ.

2) ಈ ಸರ್ಕಾರದ ಜಮೀನುಗಳ ಹಕ್ಕಿನ ಜೊತೆಗೆ ಸದರಿ ಜಮೀನುಗಳ ಬಗ್ಗೆಯಾಗಲೀ ಭಾಗಶಃ ಜಮೀನಿಗಾಗಲೀ ಅದರ ವಿಸ್ತೀರ್ಣಗಳ ಮೇಲಾಗಲೀ ಈ ಮೊದಲು ಈ ಜಮೀನುಗಳನ್ನು ಯಾವ ಉದ್ದೇಶಕ್ಕೆ ಕಾದಿರಿಸಲಾಗಿತ್ತೋ ಆ ವಿಷಯದ ಬಗ್ಗೆ ಆಸಕ್ತಿಯುಳ್ಳ ಅಥವಾ ಈ ರೀತಿಯಾದ ಘೋಷಣೆಯಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೇ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವ ಒಬ್ಬ ವ್ಯಕ್ತಿ ಸಾರ್ವಜನಿಕರು ಸಂಘ ಸಂಸ್ಥೆಯವರು ಈ ಘೋಷಣೆಯನ್ನು ಹೊರಡಿಸಿರುವ ತೊಂಬತ್ತು (90) ದಿನಗಳ ಒಳಗಾಗಿ ಸದರಿ ಘೋಷಣೆಯಿಂದ ಉಂಟಾಗಬಹುದಾದ ಪ್ರತಿಕೂಲ ಸ್ವರೂಪದ ಪರಿಣಾಮ ಹಕ್ಕಿನ ಸ್ವರೂಪದ ಪ್ರತಿಕೂಲ ಪರಿಣಾಮ ಸಂಭವಿಸಬಹುದಾದ ರೀತಿ ಮತ್ತು ಅಥವಾ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ಸ್ಪಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ತಹಶೀಲ್ದಾರ್‌ರವರು ಬೆಂಗಳೂರು ದಕ್ಷಿಣ ತಾಲ್ಲೂಕಿನವರಿಗೆ ಬರಹದ ಮೂಲಕ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಹಾಗೂ ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪ ಸಂಬಂಧಿಸಿದಂತೆ ತಹಶೀಲ್ದಾರ್‌ರವರು ಬೆಂಗಳೂರು ದಕ್ಷಿಣ ತಾಲ್ಲೂಕು ರವರು ಪರಿಶೀಲಿಸತಕ್ಕದ್ದು.

**ಪರಿಶಿಷ್ಟ**

| ಕ್ರ. ಸಂ. | ಗ್ರಾಮದ ಹೆಸರು | ಹೋಬಳಿ | ಸ. ನಂ. | ವಿಸ್ತೀರ್ಣ | ಚಕ್ಕುಬಂದಿ | | | | ವರ್ಗೀಕರಣ |
|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1. | ಎಳ್ಳುಕುಂಟೆ | ಬೇಗೂರು | 4 | 1.13 | ಸ.ನಂ. 9 | ಸ.ನಂ. 5 | ಸ.ನಂ. 31 | ಸ.ನಂ. 3 | |

ತಹಶೀಲ್ದಾರ್

ಪಿ.ಆರ್. 1713

ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-೫೬೦ ೦೦೧.

ವಿಷಯಃ- ಶ್ರೀಮತಿ ಡಿ.ರಾಜೇಶ್ವರಿ, ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಬಳ್ಳಾರಿ(ಹಾಲಿ ರಾಯಚೂರು ಜಿಲ್ಲಾ ಗ್ರಾಹಕರ ವೇದಿಕೆಯಲ್ಲಿ ಕಾರ್ಯನಿರ್ವಹಿಸುತ್ತಿರುವವರು) ಇವರ ದುರ್ನಡತೆ ಬಗ್ಗೆ ಇಲಾಖಾ ವಿಚಾರಣೆ ಮತ್ತು ಶಿಸ್ತು ಕ್ರಮ ಕುರಿತು.

ಓದಲಾಗಿದೆಃ- (೧) ಬಳ್ಳಾರಿ ಜಿಲ್ಲಾ ವೇದಿಕೆಯ ಅಧ್ಯಕ್ಷರಾದ ಶ್ರೀ ಎ.ಎ.ಹುಲಗೇರಿ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆಃಡಿಎಫ್‌ಬಿಃಎಡಿಎಂಃವಿಚಾರಣೆಃ೨೬ಃ೦೫-೦೬ ದಿನಾಂಕ ೨೭-೫-೨೦೦೬.

(೨) ಬಳ್ಳಾರಿ ಜಿಲ್ಲಾ ವೇದಿಕೆಯ ಪತ್ರ ಸಂಖ್ಯೆಃ ಜಿವೇಬಃಆಡಳಿತಃವಿಚಾರಣೆಃ೨೬ಃ ೦೫-೦೬ ದಿನಾಂಕ ೯.೫.೨೦೦೬.

(೩) ಕರ್ನಾಟಕ ರಾಜ್ಯ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಕರಾಆ:ಆಡಳಿತ: ೦೩:೨೦೦೬ ದಿನಾಂಕ ೧೧-೦೫-೨೦೦೬.

(೪) ಬಳ್ಳಾರಿ ಜಿಲ್ಲಾ ವೇದಿಕೆಯ ಅಧ್ಯಕ್ಷರ ಪತ್ರ ಸಂಖ್ಯೆ: ಜಿವೇಬ: ಆಡಳಿತ:ಇ ಇ.ವಿಚಾರಣೆ:೭:೦೬-೦೭ ದಿನಾಂಕ ೨೪-೭-೨೦೦೬.

(೫) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೧(೪)ರನ್ವಯ ಕರ್ನಾಟಕ ರಾಜ್ಯ ಆಯೋಗದಿಂದ ನೀಡಲಾದ ದಿನಾಂಕ ದಿನಾಂಕ ೧-೬-೨೦೦೬ರಂದಿನ ತಿಳುವಳಿಕೆ ಕ್ರಮ ಸಂಖ್ಯೆ:ಕರಾಆ:ಆಡಳಿತ:ದ್ವಿದಸ:೧೦:೯೯.

(೬) ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಆದೇಶ ಸಂಖ್ಯೆ:ಕರಾಆ:ಆಡಳಿತ:ದ್ವಿದಸ:೧೦:೯೯ ದಿ.೫-೮-೨೦೦೬.

(೭) ಶ್ರೀ ಎ.ಎಂ ಬೆನ್ನೂರು, ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವೇದಿಕೆ,ಬೆಂಗಳೂರು ನಗರ ಜಿಲ್ಲೆ ಹಾಗೂ ಶ್ರೀಮತಿ ಡಿ.ರಾಜೇಶ್ವರಿ, ದ್ವಿದಸ ಇವರ ವಿರುದ್ಧದ ಇಲಾಖಾ ವಿಚಾರಣೆಯ ವಿಚಾರಣಾಧಿಕಾರಿಗಳ ವರದಿ ದಿ.೩೦-೯-೨೦೦೬.

(೮) ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ತಿಳುವಳಿಕೆ ಸಂಖ್ಯೆ:ಕರಾಆ:ಆಡಳಿತ:ದ್ವಿದಸ:೧೦:೯೯ ದಿನಾಂಕ ೧೦-೧೦-೨೦೦೬.

(೯) ರಾಯಚೂರು ಜಿಲ್ಲಾ ವೇದಿಕೆಯ ತಿಳವಳಿಕೆ ಪತ್ರಸಂಖ್ಯೆ:ಜಿಗ್ರಾವೇರಾ:೧೩೧: ದಿನಾಂಕ ೬.೧೧.೨೦೦೬ ಮತ್ತು ಪತ್ರ ದಿನಾಂಕ ೬-೧೧-೨೦೦೬.

(೧೦) ರಾಯಚೂರು ಜಿಲ್ಲಾ ವೇದಿಕೆ ಪತ್ರ ಸಂಖ್ಯೆ:ಜಿಗ್ರಾವೇರಾ:೧೩೬:೦೬-೦೭ ದಿನಾಂಕ ೧೦.೧೧.೨೦೦೬.

(೧೨) ಶ್ರೀಮತಿ ಡಿ.ರಾಜೇಶ್ವರಿ, ದ್ವಿದಸ, ರಾಯಚೂರು ಇವರ ದೃಢೀಕರಣ ದಿನಾಂಕ ೧೦.೧೧.೨೦೦೬.

(೧೩) ಶ್ರೀಮತಿ ಡಿ.ರಾಜೇಶ್ವರಿ ಇವರ ಮನವಿ ದಿನಾಂಕ ೨೮-೧೧-೨೦೦೬- (ರಾಜ್ಯ ಆಯೋಗದಲ್ಲಿ ಸಲ್ಲಿಸಿರುವ ದಿನಾಂಕ ೩೦-೧೧-೨೦೦೬)

ಪ್ರಸ್ತಾವನೆ:-

ಶ್ರೀಮತಿ ಡಿ.ರಾಜೇಶ್ವರಿ, ದ್ವಿತೀಯ ದರ್ಜೆ ಸಹಾಯರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ರಾಯಚೂರು ಇವರು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ:ಕರಾಆ:ಆಡಳಿತ:೧೧:೯೮-೯೯ ದಿನಾಂಕ ೨೭-೩-೯೯ರನ್ವಯ ಅನುಕಂಪದ ಆಧಾರದ ಮೇರೆಗೆ ಬಳ್ಳಾರಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ದ್ವಿತೀಯ ದರ್ಜೆ ಸಹಾಯಕರಾಗಿ ನೇಮಕಾತಿ ಹೊಂದಿ ದಿನಾಂಕ ೩-೪-೯೯ರಿಂದ ಬಳ್ಳಾರಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ನೌಕರರಾಗಿರುತ್ತಾರೆ. ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ಬಳ್ಳಾರಿ ಜಿಲ್ಲಾ ವೇದಿಕೆಯ ಆದೇಶದನುಸಾರ ಸದರಿ ವೇದಿಕೆಯ ಸ್ವೀಕೃತಿ ಮತ್ತು ರವಾನೆ ಶಾಖೆಯ ಕಾರ್ಯವನ್ನು ನಿರ್ವಹಿಸುವುದರ ಜೊತೆಗೆ ಇತ್ಯರ್ಥವಾದ ಪ್ರಕರಣಗಳ ಇಂಡೆಕ್ಸ್ ಕಾರ್ಯ ಮಾಡುವ ಕೆಲಸವನ್ನು ಬಳ್ಳಾರಿ ಜಿಲ್ಲಾ ವೇದಿಕೆಯ ವಿವಿಧ ದಿನಾಂಕಗಳಾದ ೧೯-೫-೨೦೦೪, ೨೮-೩-೨೦೦೫, ೨೮-೯-೨೦೦೫ರ ಆದೇಶ ಸಂಖ್ಯೆ: ಜಿವೇಬ:ಆಡಳಿತ:ಕ.ಆದೇಶ:೯೯-೨೦೦೦ದನ್ವಯ ವಹಿಸಿ ಕೊಡಲಾಗಿರುತ್ತದೆ. ದಿನಾಂಕ ೨೮-೧೧-೨೦೦೫ರಂದು ಬಳ್ಳಾರಿ ಜಿಲ್ಲಾ ವೇದಿಕೆಯ ಅನಿರೀಕ್ಷಿತ ತಪಾಸಣೆಯನ್ನು ಕರ್ನಾಟಕ ರಾಜ್ಯ ಆಯೋಗದ ಶಿರಸ್ತೇದಾರರಾದ ಶ್ರೀ ಹೆಚ್.ಚಂದ್ರಶೇಖರಯ್ಯ ಮತ್ತು ಲೆಕ್ಕ ಅಧೀಕ್ಷಕರಾದ ಶ್ರೀ ಕೆ.ಆರ್ ಶ್ರೀಕಂಠಯ್ಯ ಇವರು ಜರುಗಿಸಲು ವೇದಿಕೆಗೆ ೧೦-೦೦ ಗಂಟೆಗೆ ಭೇಟಿ ನೀಡಿದಾಗ ಶ್ರೀಮತಿ ಡಿ.ರಾಜೇಶ್ವರಿ ಇವರು ಜಿಲ್ಲಾ ವೇದಿಕೆಯಲ್ಲಿ ಹಾಜರಿಲ್ಲದೇ ಬೆಳಿಗ್ಗೆ ೧೦-೫೦ಕ್ಕೆ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಬಳ್ಳಾರಿ ಜಿಲ್ಲಾ ವೇದಿಕೆಯ ಸಮಗ್ರ ತಪಾಸಣೆಯಲ್ಲಿ ಬಳ್ಳಾರಿ ಜಿಲ್ಲಾ ವೇದಿಕೆಯ ಸ್ವೀಕೃತಿ ವಹಿ, ರವಾನೆ ವಹಿ ಮತ್ತು ಸ್ಟಾಂಪ್ ವಹಿಯನ್ನು ಪರಿಶೀಲಿಸಲಾಗಿ, ಸಂಬಂಧಪಟ್ಟ ವಹಿಗಳನ್ನು ಕ್ರಮಬದ್ಧವಾಗಿ ಕಛೇರಿ ಕಾರ್ಯವಿಧಾನ ಕೈಪಿಡಿಯನುಸಾರ ಪಾಲಿಸದೇ ಇರುವುದು ಹಾಗೂ ಹಲವಾರು ಲೋಪದೋಷಗಳಿರುವುದನ್ನು ಗಮನಿಸಿ, ಸಂಬಂಧಪಟ್ಟ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಲು ಸೂಕ್ತ ತಿಳುವಳಿಕೆಯನ್ನು ದ್ವಿತೀಯ ದರ್ಜೆ ಸಹಾಯಕರಿಗೆ ನೀಡುವಂತೆ, ಹೀಗೆ ತಿಳುವಳಿಕೆ ನೀಡಿದ ನಂತರವೂ ಸಮರ್ಪಕವಾಗಿ ಕಾರ್ಯ ನಿರ್ವಹಿಸದಿದ್ದಲ್ಲಿ, ಶಿಸ್ತಿನ ಕ್ರಮಕ್ಕೆ ಆಸ್ಪದವಿರುವುದನ್ನು ತಿಳಿಸಲಾಗಿರುತ್ತದೆ. ಶ್ರೀಮತಿ ಡಿ.ರಾಜೇಶ್ವರಿ, ದ್ವಿತೀಯ ದರ್ಜೆ ಸಹಾಯಕರಿಗೆ ವಹಿಸಿದ ಇತ್ಯರ್ಥವಾದ ಪ್ರಕರಣಗಳ ಇಂಡೆಕ್ಸ್ ಕಾರ್ಯವನ್ನು ಕೂಡ ಸಮರ್ಪಕವಾಗಿ ನಿರ್ವಹಿಸದೇ ಇರುವುದು ಹಾಗೂ ಸಂಬಂಧಪಟ್ಟ ರಿಜಿಸ್ಟರ್‌ನ್ನು ಸಮರ್ಪಕವಾಗಿ ಪಾಲಿಸದೇ ಇರುವುದು ಕಂಡು ಬಂದಿರುತ್ತದೆ.

ಕರ್ನಾಟಕ ರಾಜ್ಯ ಆಯೋಗದ ಅಧ್ಯಕ್ಷರು ಜರುಗಿಸಿದ ಬಳ್ಳಾರಿ ಜಿಲ್ಲಾ ವೇದಿಕೆಯ ಸಮಗ್ರ ತಪಾಸಣಾ ವರದಿಯ ಆಧಾರದ ಮೇರೆಗೆ ಕಾರ್ಯನಿರ್ವಹಣೆಯನ್ನು ನಿರ್ವಹಿಸುವ ಸಲುವಾಗಿ ಬಳ್ಳಾರಿ ಜಿಲ್ಲಾ ವೇದಿಕೆಯ ಇನ್ನಿತರ ಸಿಬ್ಬಂದಿಯೂ ಸೇರಿದಂತೆ ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ತಿಳುವಳಿಕೆಯನ್ನು ಸದರಿ ವೇದಿಕೆಯ ಶಿರಸ್ತೇದಾರರಾದ ಶ್ರೀ ಪಿ.ಎಸ್ ಅಮರದೀಪ್ ಇವರು ತಿಳಿಸಿ ಹೇಳಿದ ಅನುಸಾರ ಶ್ರೀಮತಿ ಡಿ.ರಾಜೇಶ್ವರಿ ಇವರು ಕಾರ್ಯನಿರ್ವಹಿಸುವುದರ ಬದಲು ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ಯಾವುದೇ ಕೆಲಸವನ್ನು

ತಿಳಿಸದ ಹಾಗೆ ಹಾಗೂ ಅವರಿಂದ ಯಾವುದೇ ಕೆಲಸವನ್ನು ಮಾಡಿಸಿಕೊಳ್ಳದೇ ಇರುವ ಹಾಗೆ ಒತ್ತಡ ತರುವ ರೀತಿಯಲ್ಲಿ ದಿನಾಂಕ ೨೪-೩-೨೦೦೬ರಂದು ಸಂಜೆ ವೇಳೆಯಲ್ಲಿ ದಲಿತ ಸಂಘರ್ಷ ಸಮಿತಿಯ ಶೀ ವೆಂಕಟೇಶ್‌ಲುರವರು ಮತ್ತು ಇನ್ನಿತರರನ್ನು ಬಳ್ಳಾರಿ ಜಿಲ್ಲಾ ವೇದಿಕೆಗೆ ಕಳುಹಿಸಿ ಸದರಿ ವೇದಿಕೆಯ ಶಿರಸ್ತೇದಾರರಾದ ಶ್ರೀ ಪಿ.ಎಸ್ ಅಮರದೀಪ್ ಇವರಿಗೆ ಅವ್ಯಾಚ್ಯ ಶಬ್ದಗಳಿಂದ ಅಂದರೆ ಬೋಳಿಮಗ ಮತ್ತು ಸೂಳೆಮಗ ಎಂಬ ಶಬ್ದಗಳನ್ನು ಉಪಯೋಗಿಸುತ್ತಾ, ಶ್ರೀ ಪಿ.ಎಸ್ ಅಮರದೀಪ ಅವರಿಗೆ ಸಾರ್ವಜನಿಕ ಬೆದರಿಕೆಯನ್ನು ಹಾಕಿರುವುದಲ್ಲದೇ ಶ್ರೀಮತಿ ಡಿ.ರಾಜೇಶ್ವರಿಯವರಿಗೆ ಯಾವುದೇ ಕೆಲಸವನ್ನು ವಹಿಸದಂತೆ ಹಾಗೂ ವಹಿಸಿದ ಕೆಲಸವನ್ನು ಶ್ರೀಮತಿ ಡಿ.ರಾಜೇಶ್ವರಿ ಇವರಿಂದ ನಿರ್ವಹಿಸಿಕೊಳ್ಳದಂತೆ ಒತ್ತಡ ತಂದಿರುತ್ತಾರೆ. ಶ್ರೀಮತಿ ಡಿ.ರಾಜೇಶ್ವರಿ ಇವರ ೨೦೦೫-೦೬ನೇ ಸಾಲಿನ, ೨೦೦೪-೦೫ನೇ ಸಾಲಿನ, ೨೦೦೩-೦೪ನೇ ಸಾಲಿನ, ೨೦೦೨-೦೩ನೇ ಸಾಲಿನ, ೨೦೦೧-೦೨ನೇ ಸಾಲಿನ ಮತ್ತು ೨೦೦೦-೦೧ನೇ ಸಾಲಿನ ಕಾರ್ಯನಿರ್ವಹಣಾ ವರದಿಗಳಲ್ಲಿ ಭಾಗ-೩ರ ಕ್ರಮ ಸಂಖ್ಯೆ ೯ರಲ್ಲಿ ಸಾಮಾನ್ಯ ಮೌಲ್ಯಮಾಪನ "ಸಾಧಾರಣ'' ಹಾಗೂ ''ಸಾಧಾರಣಕ್ಕಿಂತ ಕಡಿಮೆ" ಎಂದು ಇದ್ದು, ಕರ್ನಾಟಕ ನಾಗರೀಕ ಸೇವಾ(ಕಾರ್ಯನಿರ್ವಹಣಾ ವರದಿಗಳು) ನಿಯಮಗಳು ೨೦೦೦ ಇದರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿಕೊಂಡು ಸಂಬಂಧಪಟ್ಟ ಕಾರ್ಯನಿರ್ವಹಣಾ ವರದಿಗಳನ್ನು ಯಥಾವತ್ತಾಗಿ ಅಂಗೀಕರಿಸಲಾಗಿದೆ ಮತ್ತು ಸಲಹಾತ್ಮಕ ಸ್ವರೂಪದ ವರದಿಗಳೆಂದು ಕೂಡ ಪರಿಗಣಿಸಲಾಗಿದೆ.

ಬಳ್ಳಾರಿ ಜಿಲ್ಲಾ ವೇದಿಕೆಯ ಅಧ್ಯಕ್ಷರು ದಿನಾಂಕ ೨೭-೫-೨೦೦೬ರ ಪತ್ರದಲ್ಲಿ ಶ್ರೀಮತಿ ಡಿ.ರಾಜೇಶ್ವರಿ ಇವರು ದಲಿತ ಸಂಘರ್ಷ ಸಮಿತಿಯವರನ್ನು ಜಿಲ್ಲಾ ವೇದಿಕೆಗೆ ಕಳುಹಿಸಿ ಜಿಲ್ಲಾ ವೇದಿಕೆಯ ಸಿಬ್ಬಂದಿಯವರು ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ಯಾವ ಕೆಲಸ ವಹಿಸದಂತೆ ಹಾಗೂ ವಹಿಸಿದ ಕೆಲಸವನ್ನು ಶ್ರೀಮತಿ ಡಿ.ರಾಜೇಶ್ವರಿ ಇವರಿಂದ ನಿರ್ವಹಿಸಿಕೊಳ್ಳದಂತೆ ಒತ್ತಡ ತಂದಿರುವ ಬಗ್ಗೆ ಮತ್ತು ಶ್ರೀಮತಿ ಡಿ.ರಾಜೇಶ್ವರಿ ಇವರ ಕಾರ್ಯನಿರ್ವಹಣೆ ತೃಪ್ತಿಕರವಾಗಿಲ್ಲದಿರುವ ಬಗ್ಗೆ ಮತ್ತು ದಿನಾಂಕ ೫-೪-೨೦೦೬ರಂದು ಶ್ರೀಮತಿ ಡಿ.ರಾಜೇಶ್ವರಿ ಇವರ ಸಂಬಂಧಿಕರಾದ ಶ್ರೀ ರಂಗಸ್ವಾಮಿ ಎಂಬುವವರು ಜಿಲ್ಲಾ ವೇದಿಕೆಗೆ ಬಂದು ಬೆದರಿಕೆ ಹಾಕಿರುವ ಬಗ್ಗೆ ಸೂಕ್ತ ಕ್ರಮಕೈಗೊಳ್ಳುವಂತೆ ಕೋರಿರುತ್ತಾರೆ. ಬಳ್ಳಾರಿ ಜಿಲ್ಲಾ ವೇದಿಕೆಯ ಅಧ್ಯಕ್ಷರ ಪತ್ರವನ್ನು ಅನುಸರಿಸಿಕೊಂಡು, ಸದರಿ ಪತ್ರದೊಂದಿಗೆ ಲಗತ್ತಿಸಿದ್ದ ಶ್ರೀ ಪಿ.ಎಸ್ ಅಮರದೀಪ್ ಇವರ ಮನವಿ ದಿನಾಂಕ ೨೫-೩-೨೦೦೬, ಬಳ್ಳಾರಿ ಜಿಲ್ಲಾ ವೇದಿಕೆಯ ಸಹಾಯಕ ರಿಜಿಸ್ಟ್ರಾರ್ ಮತ್ತು ಸಹಾಯಕ ಆಡಳಿತಾಧಿಕಾರಿಗಳಾದ ಶ್ರೀ ಕೆ.ಎಂ ಅಸ್ಲಾಂ ಪಾಷ, ಶೀಘ್ರಲಿಪಿಗಾರರಾದ ಶ್ರೀ ತೋಟದ ರವಿಕುಮಾರ್, ಶ್ರೀ ಶಿವರಾಜ್, ಅನ್ಯಕರ್ತವ್ಯದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಕೆ.ವಿಜಯಕುಮಾರ್, ಗ್ರೂಪ್ 'ಡಿ' ನೌಕರರಾದ ಶ್ರೀ ಅಶೋಕ್ ಕಣದಾಳು, ಶ್ರೀ ಕೆ.ಎಸ್ ಮಾಬುಸಾಬ್ ಮತ್ತು ಶ್ರೀ ಟಿ.ಸಿದ್ದಪ್ಪ ಇವರು ಸಹಿ ಮಾಡಿರುವ ದಿನಾಂಕ ೨೫-೩-೨೦೦೬ರ ಮನವಿ, ಬಳ್ಳಾರಿ ಜಿಲ್ಲಾ ವೇದಿಕೆಯ ಕಾರಣ ಕೇಳಿ ಸೂಚನಾ ಪತ್ರ ದಿನಾಂಕ ೫-೪-೨೦೦೬, ಶ್ರೀ ಕೆ.ಎಂ ಅಸ್ಲಾಂ ಪಾಷ ಇವರ ಮನವಿ ದಿನಾಂಕ ೫-೪-೨೦೦೬ ಮತ್ತು ಶ್ರೀಮತಿ ಡಿ.ರಾಜೇಶ್ವರಿ ಇವರ ಸಮಜಾಯಿಷಿ ದಿನಾಂಕ ೧೨-೪-೨೦೦೬, ಬಳ್ಳಾರಿ ಜಿಲ್ಲಾ ವೇದಿಕೆಯ ಕಛೇರಿ ಆದೇಶ ದಿನಾಂಕ ೧೯-೫-೨೦೦೪, ೨೮-೩-೨೦೦೫, ೨೮-೯-೨೦೦೫ ಇವುಗಳನ್ನು, ಬಳ್ಳಾರಿ ಜಿಲ್ಲಾ ವೇದಿಕೆಯ ಸಮಗ್ರ ತಪಾಸಣಾ ವರದಿಯನ್ನು ಮತ್ತು ಶ್ರೀಮತಿ ಡಿ.ರಾಜೇಶ್ವರಿ, ದ್ವಿದಸ, ಬಳ್ಳಾರಿ ಜಿಲ್ಲಾ ವೇದಿಕೆ ಇವರ ೧೯೯೯-೨೦೦೦ನೇ ಸಾಲಿನಿಂದ ೨೦೦೫-೦೬ನೇ ಸಾಲಿನ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿಕೊಂಡು, ಸಂಬಂಧಪಟ್ಟ ನೌಕರರು ಬಳ್ಳಾರಿ ಜಿಲ್ಲಾ ವೇದಿಕೆಯಲ್ಲಿ ಸಮರ್ಪಕವಾಗಿ ನಿಷ್ಠೆ ಮತ್ತು ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿಲ್ಲದಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಹಾಗೂ ನಿಷ್ಠೆ ಮತ್ತು ದಕ್ಷತೆಯಿಂದ ಕಾರ್ಯನಿರ್ವಹಿಸಲು ಬಳ್ಳಾರಿ ಜಿಲ್ಲಾ ವೇದಿಕೆಯ ಮೇಲಾಧಿಕಾರಿಗಳು ಸೂಚನೆ ನೀಡಿದಾಗ, ಅಂತಹ ಸೂಚನೆಯನ್ನು ಅನುಸರಿಸಿಕೊಂಡು ಕ್ರಮವಹಿಸುವ ಬದಲು ದಲಿತ ಸಂಘರ್ಷ ಸಮಿತಿಯ ಹಾಗೂ ಇನ್ನಿತರ ವ್ಯಕ್ತಿಗಳಿಂದ ಜಿಲ್ಲಾ ವೇದಿಕೆಯ ಸಿಬ್ಬಂದಿ ಮತ್ತು ಅಧಿಕಾರಿಗಳ ಮೇಲೆ ಶ್ರೀಮತಿ ಡಿ.ರಾಜೇಶ್ವರಿ ಇವರಿಂದ ಯಾವುದೇ ಕೆಲಸ ಮಾಡಿಸಿಕೊಳ್ಳದ ರೀತಿಯಲ್ಲಿ ಒತ್ತಡ ತಂದಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ, ಸಾರ್ವಜನಿಕ ಹಿತದೃಷ್ಟಿಯಿಂದ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿಕೊಂಡು, ಶ್ರೀಮತಿ ಡಿ.ರಾಜೇಶ್ವರಿ ಇವರನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಕರಾಆ:ಆಡಳಿತ:೦೩:೨೦೦೬ ದಿನಾಂಕ ೧೧-೦೫-೨೦೦೬ರನ್ವಯ ರಾಯಚೂರು ಜಿಲ್ಲಾ ವೇದಿಕೆಗೆ ವರ್ಗಾಯಿಸಲಾಗಿದೆ. ಶ್ರೀಮತಿ ಡಿ.ರಾಜೇಶ್ವರಿ ಇವರು ದಿನಾಂಕ ೦೭-೦೬-೨೦೦೬ರಿಂದ ರಾಯಚೂರು ಜಿಲ್ಲಾ ಗ್ರಾಹಕರ ವೇದಿಕೆಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಶ್ರೀಮತಿ ಡಿ.ರಾಜೇಶ್ವರಿ ಇವರನ್ನು ರಾಯಚೂರು ಜಿಲ್ಲಾ ಗ್ರಾಹಕರ ವೇದಿಕೆಗೆ ವರ್ಗಾಯಿಸಿದ ನಂತರ ಬಳ್ಳಾರಿ ಜಿಲ್ಲಾ ವೇದಿಕೆಯ ಅಧ್ಯಕ್ಷರ ವರದಿಯ ಆಧಾರದ ಮೇರೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೧(೪)ರನ್ವಯ ಎರಡು ಆರೋಪಗಳನ್ನು ರಚಿಸಿದ್ದು, ಶ್ರೀಮತಿ ಡಿ.ರಾಜೇಶ್ವರಿ ಇವರ ಕಾರ್ಯನಿರ್ವಹಣೆಯು ಅತೃಪ್ತಿಕರವಾಗಿರುತ್ತದೆಯಲ್ಲದೇ ಕರ್ತವ್ಯವನ್ನು ನಿಯಮಾನುಸಾರ ಸಮರ್ಪಕವಾಗಿ ನಿಷ್ಠೆಯಿಂದ ನಿರ್ವಹಿಸಿರುವುದಿಲ್ಲ ಹಾಗೂ ಕರ್ತವ್ಯ ನಿಷ್ಠೆಯನ್ನು ಪಾಲಿಸಿಕೊಂಡು ಬಂದಿರುವುದಿಲ್ಲ ಮತ್ತು ಹಾಗೂ ಸಂಪೂರ್ಣ ನೀತಿ, ನಿಷ್ಠೆ, ಕರ್ತವ್ಯ ನಿಷ್ಠೆ ಮತ್ತು ದಕ್ಷತೆ ಇಲ್ಲದಿರುವುದನ್ನು ತೋರ್ಪಡಿಸಿ ದುರ್ನಡತೆಯನ್ನೆಸಗಿ ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಗಳು ೧೯೬೬ರ ೩ನೇ ನಿಯಮದ ೧ನೇ ಉಪನಿಯಮದ (i) ಮತ್ತು (ii) ನೇ ಖಂಡಗಳನ್ನು ಉಲ್ಲಂಘಿಸಿರುವುದು ಮೊದಲನೇ ಆರೋಪವಾಗಿರುತ್ತದೆ. ಶ್ರೀಮತಿ ಡಿ.ರಾಜೇಶ್ವರಿ ಇವರ ಕಾರ್ಯನಿರ್ವಹಣೆಯು ಅತೃಪ್ತಿಕರವಾಗಿದ್ದರ ಸಲುವಾಗಿ ದಿನಾಂಕ:

೧೯-೫-೨೦೦೪, ೨೮-೩-೨೦೦೫, ೨೯-೯-೨೦೦೫ರ ಬಳ್ಳಾರಿ ಜಿಲ್ಲಾ ವೇದಿಕೆಯ ಆದೇಶದ ಮೂಲಕ ಬಾಕಿ ಕೆಲಸಗಳನ್ನು ಪೂರೈಸುವಂತೆ ಸೂಚಿಸಿದ್ದು, ದಿನಾಂಕ ೨೮-೧೧-೨೦೦೫ ಮತ್ತು ೨೯-೧೧-೨೦೦೫ರಂದು ಜರುಗಿಸಿದ ಸಮಗ್ರ ತಪಾಸಣೆಯಲ್ಲಿ ಶ್ರೀಮತಿ ಡಿ.ರಾಜೇಶ್ವರಿ ಇವರ ಕಾರ್ಯವು ಸಮರ್ಪಕವಾಗಿಲ್ಲದಿರುವುದು ಕಂಡು ಬಂದಿದ್ದರಿಂದ ತಪಾಸಣಾ ವರದಿಯಲ್ಲಿನ ನಿರ್ದೇಶನದನುಸಾರ ಮೇಲಾಧಿಕಾರಿಗಳಿಂದ ಕೆಲಸಗಳನ್ನು ಕಲಿತುಕೊಂಡು ಕರ್ತವ್ಯ ನಿಷ್ಠೆಯನ್ನು ಪ್ರದರ್ಶಿಸುವ ಬದಲು, ಶ್ರೀಮತಿ ಡಿ.ರಾಜೇಶ್ವರಿ ಇವರು ತಮ್ಮ ಕಡೆಯವರನ್ನು(ದಲಿತ ಸಂಘರ್ಷ ಸಮಿತಿಯವರನ್ನು) ದಿನಾಂಕ ೨೪-೩-೨೦೦೬ರಂದು ಸಂಜೆ ೪-೩೦ ಗಂಟೆಗೆ ಬಳ್ಳಾರಿ ಜಿಲ್ಲಾ ವೇದಿಕೆಗೆ ಕಳುಹಿಸಿ ಮೇಲಾಧಿಕಾರಿಗಳಿಗೆ ಅವ್ಯಾಚ್ಯ ಶಬ್ದಗಳನ್ನು ಉಪಯೋಗಿಸುತ್ತಾ, ಗಲಾಟೆ ಮಾಡಿಸಿರುತ್ತಾರೆ ಹಾಗೂ ದಿನಾಂಕ ೫-೪-೨೦೦೬ರಂದು ಮಧ್ಯಾಹ್ನ ೧೨-೪೫ ಗಂಟೆಗೆ ಶ್ರೀ ರಂಗಸ್ವಾಮಿ ಎಂಬುವವರನ್ನು ಬಳ್ಳಾರಿ ಜಿಲ್ಲಾ ವೇದಿಕೆಗೆ ಕಳುಹಿಸಿ ಮೇಲಾಧಿಕಾರಿಗಳಿಗೆ ಬೆದರಿಕೆ ಹಾಕಿಸಿರುತ್ತಾರೆ ಮತ್ತು ದಿನಾಂಕ ೧೨-೪-೨೦೦೬ರ ಸಮಜಾಯಿಷಿಯಲ್ಲಿ ಮೇಲಾಧಿಕಾರಿಗಳ ವಿರುದ್ಧ ಸುಳ್ಳು ಆರೋಪ ಮಾಡುತ್ತಾ, ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಾಗಿ ಕಾನೂನು ಬಾಹಿರವಾದ ಬೆದರಿಕೆ ಹಾಕಿರುವುದಲ್ಲದೇ, ಶ್ರೀಮತಿ ಡಿ.ರಾಜೇಶ್ವರಿ ಇವರಿಂದ ಯಾವುದೇ ರೀತಿಯಲ್ಲಿ ಜಿಲ್ಲಾ ವೇದಿಕೆಯು ಕಾರ್ಯನಿರ್ವಹಿಸಿಕೊಳ್ಳಲಾಗದ ರೀತಿಯಲ್ಲಿ ಪ್ರಭಾವ ಹಾಗೂ ಬೆದರಿಕೆಯನ್ನು ಒಡ್ಡಿರುತ್ತಾರೆ ಮತ್ತು ಸರ್ಕಾರಿ ನೌಕರರು ಮಾಡುವುದು ಅನುಚಿತವೆಂದು ತೋರುವಂತಹ ಕೆಲಸವನ್ನು ಮಾಡುತ್ತಾ, ದಕ್ಷ ಕಾರ್ಯನಿರ್ವಹಣೆಯನ್ನು ಮೇಲಾಧಿಕಾರಿಗಳು ಹಾಗೂ ಜಿಲ್ಲಾ ವೇದಿಕೆಯು ನಿರೀಕ್ಷಿಸಿದ ರೀತಿಯಲ್ಲಿ ನಿರ್ವಹಿಸದಿರುವ ರೀತಿಯಲ್ಲಿ ಪ್ರಭಾವ ಬೀರಿರುವುದನ್ನು ದೃಢಪಡಿಸಿ, ದುರ್ನಡತೆಯನ್ನೆಸಗಿ ಕರ್ನಾಟಕ ನಾಗರೀಕ ಸೇವಾ(ವರ್ತನೆ)ನಿಯಮಗಳು ೧೯೬೬ರ ೩ನೇ ನಿಯಮದ ೧ನೇ ಉಪನಿಯಮದ ೩ನೇ ಕಂಡಿಕೆಯನ್ನು ಮತ್ತು ನಿಯಮ ೨೬ನ್ನು ಉಲ್ಲಂಘಿಸಿದ್ದಾರೆ ಎಂಬುದು ೨ನೇ ಆರೋಪವಾಗಿರುತ್ತದೆ.

ಈ ಆರೋಪಗಳನ್ನು ಒಳಗೊಂಡ ಆರೋಪ ಪಟ್ಟಿಯನ್ನು, ಆರೋಪಗಳ ಸಮರ್ಥನಾ ಪಟ್ಟಿಯನ್ನು, ದಸ್ತಾವೇಜುಗಳ ಪಟ್ಟಿಯನ್ನು ಮತ್ತು ಸಾಕ್ಷಿಗಳ ಪಟ್ಟಿಯನ್ನು ರಾಜ್ಯ ಆಯೋಗದ ದಿನಾಂಕ ೧-೬-೨೦೦೬ರ ತಿಳುವಳಿಕೆ ಮೂಲಕ ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ಕಳುಹಿಸಿದ್ದು, ಶ್ರೀಮತಿ ಡಿ.ರಾಜೇಶ್ವರಿ ಇವರು ಸದರಿ ತಿಳುವಳಿಕೆಯನ್ನು ಸ್ವೀಕರಿಸಿದ್ದು, ಸದರಿ ಸ್ವೀಕೃತಿ ಮೇಲೆ ದಿನಾಂಕ ಸ್ಪಷ್ಟವಾಗಿಲ್ಲದಿದ್ದರೂ ಕೂಡ, ದಿನಾಂಕ ೧೫-೬-೨೦೦೬ರೊಳಗೆ ತಿಳುವಳಿಕೆಯು ಸಂಬಂಧಪಟ್ಟ ನೌಕರರಿಗೆ ತಲುಪಿರುತ್ತದೆ. ಹೀಗೆ ನೋಟೀಸ್ ತಲುಪಿದ ೧೫ ದಿನಗಳ ಕಾಲಾವಕಾಶ ಪೂರ್ತಿಯಾದ ನಂತರವೂ ಅಂದರೆ ದಿನಾಂಕ ೬-೭-೨೦೦೬ರವರೆಗೆ ಶ್ರೀಮತಿ ಡಿ.ರಾಜೇಶ್ವರಿ ಇವರು ಯಾವುದೇ ಲಿಖಿತ ಹೇಳಿಕೆ ಅಥವಾ ದಾಖಲೆಗಳನ್ನು ಸಲ್ಲಿಸಿ, ಆರೋಪಗಳನ್ನು ಅಲ್ಲಗೆಳೆಯಲು ಅಥವಾ ತಿರಸ್ಕರಿಸಲು ಪ್ರಯತ್ನಿಸಿರುವುದಿಲ್ಲ ಮತ್ತು ಯಾವುದೇ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ಶ್ರೀಮತಿ ಡಿ.ರಾಜೇಶ್ವರಿ ಇವರು ಯಾವುದೇ ಸಮಜಾಯಿಷಿ, ಲಿಖಿತ ಹೇಳಿಕೆ ಅಥವಾ ದಾಖಲೆಗಳನ್ನು ಸಲ್ಲಿಸದೇ ಇದ್ದರೂ ಕೂಡ, ಶ್ರೀಮತಿ ಡಿ.ರಾಜೇಶ್ವರಿ ಇವರ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಸತ್ಯತೆಗಳನ್ನು ತಿಳಿದುಕೊಳ್ಳುವ ಸಲುವಾಗಿ ಶ್ರೀಮತಿ ಡಿ.ರಾಜೇಶ್ವರಿ ಇವರು ನಿರ್ವಹಿಸುತ್ತಿದ್ದ ಸ್ವೀಕೃತಿ ಮತ್ತು ರವಾನೆ ಶಾಖೆಗೆ ಸಂಬಂಧಪಟ್ಟ ರವಾನೆ ವಹಿ, ಸ್ವೀಕೃತಿ ವಹಿ, ಸ್ಟಾಂಪ್ ವಹಿ ಮತ್ತು ಇಂಡೆಕ್ಸ್ ಕಾರ್ಯದ ಬಗ್ಗೆ ವಿವರವನ್ನು ಒದಗಿಸುವಂತೆ ಬಳ್ಳಾರಿ ಜಿಲ್ಲಾ ಗ್ರಾಹಕರ ವೇದಿಕೆಗೆ ಕರ್ನಾಟಕ ರಾಜ್ಯ ಆಯೋಗದ ದಿನಾಂಕ ೭-೭-೨೦೦೬ರ ಪತ್ರದ ಮೂಲಕ ತಿಳಿಸಲಾಗಿ, ಬಳ್ಳಾರಿ ಜಿಲ್ಲಾ ವೇದಿಕೆಯ ಅಧ್ಯಕ್ಷರು ದಿನಾಂಕ ೨೪-೭-೨೦೦೬ರ ಪತ್ರದ ಮೂಲಕ ಶ್ರೀಮತಿ ಡಿ.ರಾಜೇಶ್ವರಿ ಇವರ ಕಾರ್ಯನಿರ್ವಹಣೆ ಬಗ್ಗೆ ಸಂಪೂರ್ಣ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯನುಸಾರ ಶ್ರೀಮತಿ ಡಿ.ರಾಜೇಶ್ವರಿ, ದ್ವಿದಸ ಇವರು ತಮಗೆ ವಹಿಸಿದ ಕೆಲಸಗಳನ್ನು ಸಮಗ್ರವಾಗಿ ನಿರ್ವಹಿಸದೇ ಇರುವುದು, ಸ್ಟಾಂಪ್ ವಹಿಯಲ್ಲಿ ರೂ.೪೩-೦೦ಕ್ಕೆ ಸಂಬಂಧಿಸಿದಂತೆ ಸ್ಟಾಂಪ್‌ಗಳ ಕೊರತೆ ಇರುವುದು ಮತ್ತು ಸ್ಟಾಂಪ್ ವಹಿ, ರವಾನೆ ವಹಿ, ಸ್ವೀಕೃತಿ ವಹಿಯನ್ನು ಕಛೇರಿ ಕಾರ್ಯವಿಧಾನ ಕೈಪಿಡಿಯನುಸಾರ ಪಾಲಿಸದೇ ಇರುವುದು ಸ್ವೀಕೃತಿ ಹಾಗೂ ರವಾನೆಗೆ ಸಂಬಂಧಿಸಿದ ವಹಿಗಳಲ್ಲಿ ಕ್ರಮಸಂಖ್ಯೆಗಳನ್ನು ಕ್ರಮಬದ್ಧವಾಗಿ ಹಾಕದೇ ಇರುವುದು ಹಾಗೂ ಇಂಡೆಕ್ಸ್ ಕಾರ್ಯವನ್ನು ಶ್ರೀಮತಿ ಡಿ.ರಾಜೇಶ್ವರಿ ಇವರಿಂದ ನಿರ್ವಹಿಸಿಕೊಳ್ಳಲಾಗದೇ ಇದ್ದುದ್ದರ ಹಿನ್ನೆಲೆಯಲ್ಲಿ ಸದರಿ ವೇದಿಕೆಯ ಶೀಘ್ರಲಿಪಿಗಾರರಿಂದ ನಿರ್ವಹಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ. ಹೀಗೆ ಶ್ರೀಮತಿ ಡಿ.ರಾಜೇಶ್ವರಿ ಇವರ ಕಾರ್ಯನಿರ್ವಹಣೆಯು ಸಮರ್ಪಕವಾಗಿ ಇಲ್ಲದೇ ಇರುವುದು ಕಾರ್ಯನಿರ್ವಹಣಾ ವರದಿಗಳಲ್ಲಿ ಸಾಮಾನ್ಯ ಮೌಲ್ಯಮಾಪನವು "ಸಾಧಾರಣ", ಅಥವಾ "ಸಾಧಾರಣಕ್ಕಿಂತ ಕಡಿಮೆ" ಎಂದು ಇರುವುದು ಮತ್ತು ಇವರು ಮೇಲಾಧಿಕಾರಿಗಳ ಸೂಚನೆಯನ್ನು ಅನುಸರಿಸಿಕೊಂಡು ಕಾರ್ಯನಿರ್ವಹಿಸದೇ ಇರುವುದು, ಮೇಲಾಧಿಕಾರಿಗಳ ವಿರುದ್ಧವೇ ಇಲ್ಲಸಲ್ಲದ ದಾಖಲೆ ಹಾಗೂ ಆಧಾರರಹಿತವಾದ ಆರೋಪಗಳನ್ನು ಮಾಡುತ್ತಾ, ಪ್ರಾಣತ್ಯಾಗ ಮಾಡುವುದಾಗಿ ಬೆದರಿಕೆ ಹಾಕಿರುವುದು ಶ್ರೀಮತಿ ಡಿ.ರಾಜೇಶ್ವರಿ ಇವರೇ ಸಲ್ಲಿಸಿರುವ ದಿನಾಂಕ ೨೬-೫-೨೦೦೬ರ ಮನವಿಯಲ್ಲಿ "ಡಿ.ಎಸ್.ಎಸ್ ಸಂಘದ ಪದಾಧಿಕಾರಿಗಳು ಬಂದು ಕಛೇರಿಯ ಸಿಬ್ಬಂದಿಯನ್ನು ವಿಚಾರಿಸಿದ ವಿಷಯವು ತಪ್ಪೆಂದು ನಾನು ಒಪ್ಪಿಕೊಳ್ಳುತ್ತಾ, ಇನ್ನೆಂದೂ ಈ ರೀತಿಯಾಗಿ ಪುನರಾವರ್ತನೆಯಾಗದಂತೆ ಎಚ್ಚರ ವಹಿಸುತ್ತೇನೆಂದು ಹೇಳುತ್ತಾ, ನನ್ನನ್ನು ಕ್ಷಮಿಸಲು ಕೋರುತ್ತೇನೆ" ಎಂದು ಮನವಿ ಮಾಡಿರುವುದರಿಂದಲೂ ಶ್ರೀಮತಿ ಡಿ.ರಾಜೇಶ್ವರಿ ಇವರು ಬಳ್ಳಾರಿ ಜಿಲ್ಲಾ ವೇದಿಕೆಯ ನೌಕರರು ಮತ್ತು ಅಧಿಕಾರಿಗಳ ಮೇಲೆ ಬಾಹ್ಯ ಹಾಗೂ ಕಾನೂನು ಬಾಹಿರ ಒತ್ತಡ ತಂದಿರುವುದು ಹಾಗೂ ಮೇಲಾಧಿಕಾರಿಗಳು ಇವರಿಂದ ಕಾರ್ಯನಿರ್ವಹಿಸಿಕೊಳ್ಳದಿರುವ ಹಾಗೆ ಒತ್ತಡ ತಂದಿರುವುದು ಮೇಲ್ನೋಟಕ್ಕೆ ಕಂಡು ಬಂದರೂ ಕೂಡ, ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ಇನ್ನು ಒಂದು ಅವಕಾಶವನ್ನು ಕೊಟ್ಟು ವಿಚಾರಣೆಯನ್ನು ಮಾಡಿಸಿ, ವರದಿ ಪಡೆದು, ಶಿಸ್ತು ಕ್ರಮ ಜರುಗಿಸುವ ಬಗ್ಗೆ ಪರಿಶೀಲಿಸುವುದು ಸೂಕ್ತವೆಂದು ಭಾವಿಸಿ ಇಲಾಖಾ ವಿಚಾರಣೆ ಮಾಡಿಸಲಾಗಿದೆ.

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಆದೇಶ ಸಂಖ್ಯೆ:ಕರಾಆ:ಆಡಳಿತ:ದ್ವಿದಸ:೧೦:೯೯ ದಿನಾಂಕ ೫-೮-೨೦೦೬ರನ್ವಯ ಬೆಂಗಳೂರು ನಗರ ಜಿಲ್ಲಾ ವೇದಿಕೆಯ ಅಧ್ಯಕ್ಷರಾದ ಶ್ರೀ ಎ.ಎಂ ಬೆನ್ನೂರು ಇವರನ್ನು ಶ್ರೀಮತಿ ಡಿ.ರಾಜೇಶ್ವರಿ ಇವರ ವಿರುದ್ಧ ಆರೋಪಗಳ ವಿಚಾರಣೆಗಾಗಿ "ವಿಚಾರಣಾಧಿಕಾರಿಯಾಗಿ" ಮತ್ತು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳಾದ ಶ್ರೀ ಕೆ.ಎಲ್.ಶಿವಲಿಂಗೇಗೌಡ ಇವರನ್ನು ಶ್ರೀಮತಿ ಡಿ.ರಾಜೇಶ್ವರಿ, ದ್ವಿತೀಯ ದರ್ಜೆ ಸಹಾಯಕರು ಇವರ ವಿರುದ್ಧ ಆರೋಪಗಳ ವಿಚಾರಣೆಯ "ಮಂಡನಾಧಿಕಾರಿಯಾಗಿ" ನೇಮಿಸಲಾಗಿರುತ್ತದೆ.

ಶ್ರೀ ಎ.ಎಂ ಬೆನ್ನೂರು, ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಬೆಂಗಳೂರು ನಗರ ಜಿಲ್ಲೆ ಇವರು ಶ್ರೀಮತಿ ಡಿ.ರಾಜೇಶ್ವರಿ ಇವರ ವಿರುದ್ಧದ ವಿಚಾರಣಾಧಿಕಾರಿಯ ಕಾರ್ಯವನ್ನು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರನ್ವಯ ನಿರ್ವಹಿಸಿ, ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ತಿಳುವಳಿಕೆಯನ್ನು ನೀಡಿ, ಇಲಾಖಾ ವಿಚಾರಣೆಗೆ ಹಾಜರಾಗಲು ಸೂಚಿಸಿದ್ದು, ಶ್ರೀಮತಿ ಡಿ.ರಾಜೇಶ್ವರಿ ಇವರು ಇಲಾಖಾ ವಿಚಾರಣೆಗೆ ಹಾಜರಾಗದೇ ಗೈರು ಹಾಜರಾಗಿದ್ದರ ಹಿನ್ನೆಲೆಯಲ್ಲಿ ಸದರಿಯವರನ್ನು ಏಕಪಕ್ಷೀಯವೆಂದು ಘೋಷಿಸಿ, ಬಳ್ಳಾರಿ ಜಿಲ್ಲಾ ವೇದಿಕೆಯ ಸಹಾಯಕ ರಿಜಿಸ್ಟ್ರಾರ್ ಮತ್ತು ಸಹಾಯಕ ಆಡಳಿತಾಧಿಕಾರಿಗಳಾಗಿದ್ದ ಶ್ರೀ ಕೆ.ಎಂ ಅಸ್ಲಾಂ ಪಾಷ ಇವರನ್ನು ವಿಚಾರಣೆ ಮಾಡಿ, ನಿಶಾನೆ ಪಿ೧ರಿಂದ ನಿಶಾನೆ ಪಿ೧೩ರವರೆಗೆ ದಾಖಲೆಗಳನ್ನು ಗುರುತಿಸಿಕೊಂಡು, ಶ್ರೀಮತಿ ಡಿ.ರಾಜೇಶ್ವರಿ ಇವರ ವಿರುದ್ಧದ ಎರಡೂ ಆರೋಪಗಳು ನಿಸ್ಸಂದೇಹವಾಗಿ ರುಜುವಾತಾಗಿರುವ ಬಗ್ಗೆ ದಿನಾಂಕ ೩೦-೯-೨೦೦೬ರಂದು ವರದಿಯನ್ನು ಈಉ ೦ಜ.೨/೨೦೦೬ರಲ್ಲಿ ದಾಖಲಿಸಿ, ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವುದರ ಜೊತೆಗೆ ಒಂದು ಪ್ರತಿಯನ್ನು ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ಕಳುಹಿಸಿ ಕೊಟ್ಟಿರುತ್ತಾರೆ.

ಇಲಾಖಾ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಆಪಾದಿತ ನೌಕರರಿಗೆ ಕಳುಹಿಸಿ ಕೊಟ್ಟಿರುವುದರ ಜೊತೆಗೆ, ಶಿಸ್ತು ಪ್ರಾಧಿಕಾರದಿಂದಲೂ ರಾಜ್ಯ ಆಯೋಗದ ದಿನಾಂಕ ೧೦-೧೦-೨೦೦೬ರ ತಿಳುವಳಿಕೆ ಮೂಲಕ ಶ್ರೀಮತಿ ಡಿ.ರಾಜೇಶ್ವರಿ ಇವರಿಗೆ ಇಲಾಖಾ ವಿಚಾರಣಾ ವರದಿಯನ್ನು ದಿನಾಂಕ ೧೦-೧೧-೨೦೦೬ರಂದು ರಾಯಚೂರು ಜಿಲ್ಲಾ ವೇದಿಕೆಯ ಅಧ್ಯಕ್ಷರ ಮೂಲಕ ಜಾರಿ ಮಾಡಿಸಲಾಗಿರುತ್ತದೆ. ಹೀಗೆ ಇಲಾಖಾ ವಿಚಾರಣಾ ವರದಿಯು ಜಾರಿ ಆದ ಬಗ್ಗೆ ಶ್ರೀಮತಿ ಡಿ.ರಾಜೇಶ್ವರಿ, ದ್ವಿತೀಯ ದರ್ಜೆ ಸಹಾಯಕರು ಹಾಗೂ ಅಧ್ಯಕ್ಷರು, ರಾಯಚೂರು ಜಿಲ್ಲಾ ಗ್ರಾಹಕರ ವೇದಿಕೆ, ರಾಯಚೂರು ಇವರು ದೃಢೀಕರಣವನ್ನು ಸಲ್ಲಿಸಿರುತ್ತಾರೆ. ಇಲಾಖಾ ವಿಚಾರಣಾ ವರದಿಯನ್ನು ಜಾರಿ ಮಾಡಿದ ದಿನಾಂಕ ೧೦-೧೦-೨೦೦೬ರ ತಿಳುವಳಿಕೆ ಪತ್ರದಲ್ಲಿ, ತಿಳುವಳಿಕೆ ತಲುಪಿದ ೧೫ ದಿನಗಳೊಳಗಾಗಿ ಇಲಾಖಾ ವಿಚಾರಣಾ ವರದಿಗೆ ಆಕ್ಷೇಪಣೆ ಅಥವಾ ಹೇಳಿಕೆಯನ್ನು ಸೂಕ್ತ ದಾಖಲೆಗಳೊಂದಿಗೆ ಸಲ್ಲಿಸದಿದ್ದಲ್ಲಿ, ಶ್ರೀಮತಿ ಡಿ.ರಾಜೇಶ್ವರಿ ಇವರ ಆಕ್ಷೇಪಣೆ:ಹೇಳಿಕೆ ವಿಚಾರಣಾ ವರದಿಗೆ ಸಂಬಂಧಿಸಿದಂತೆ ಯಾವುದೂ ಇಲ್ಲವೆಂದು ತೀರ್ಮಾನಿಸಿ ಸೂಕ್ತ ಆದೇಶವನ್ನು ಶಿಸ್ತು ಪ್ರಾಧಿಕಾರದಿಂದ ಹೊರಡಿಸಲಾಗುವುದೆಂದು ಸ್ಪಷ್ಟವಾಗಿ ತಿಳಿಸಿದ್ದರೂ ಕೂಡ, ಶ್ರೀಮತಿ ಡಿ.ರಾಜೇಶ್ವರಿ ಇವರು ದಿನಾಂಕ ೨೬-೧೧-೨೦೦೬ರೊಳಗಾಗಿ ಯಾವುದೇ ಹೇಳಿಕೆ ಅಥವಾ ಆಕ್ಷೇಪಣೆಯನ್ನು ಸಲ್ಲಿಸಿರುವುದಿಲ್ಲ. ಶ್ರೀಮತಿ ಡಿ.ರಾಜೇಶ್ವರಿ ಇವರು ಸಹಿ ಮಾಡಿರುವ ದಿನಾಂಕ ೨೮-೧೧-೨೦೦೬ರ ಮನವಿಯು ಕರ್ನಾಟಕ ರಾಜ್ಯ ಆಯೋಗಕ್ಕೆ ದಿನಾಂಕ ೩೦-೧೧-೨೦೦೬ರಂದು ಸಲ್ಲಿಸಲ್ಪಟ್ಟಿರುತ್ತದೆ. ಶ್ರೀಮತಿ ಡಿ.ರಾಜೇಶ್ವರಿ ಇವರು ಇಲಾಖಾ ವಿಚಾರಣಾ ವರದಿಗೆ ಆಕ್ಷೇಪಣೆ ಅಥವಾ ಹೇಳಿಕೆಯನ್ನು ಸಲ್ಲಿಸಲು ನೀಡಲಾಗಿದ್ದ ೧೫ ದಿನಗಳ ಕಾಲಾವಕಾಶ ಮುಗಿದ ನಂತರವೇ ಸಲ್ಲಿಸಿರುವ ದಿನಾಂಕ ೨೮-೧೧-೨೦೦೬ರ ಮನವಿಯಲ್ಲಿ ಶ್ರೀಮತಿ ಡಿ.ರಾಜೇಶ್ವರಿ ಇವರ ವಿರುದ್ಧದ ಎರಡು ಆರೋಪಗಳನ್ನು ಹಾಗೂ ಇಲಾಖಾ ವಿಚಾರಣಾ ವರದಿಯನ್ನು ಅಲ್ಲಗೆಳೆಯಲು ಅಥವಾ ತೊಡೆದು ಹಾಕಲು ಯಾವುದೇ ಸಕಾರಣಗಳನ್ನೊಳಗೊಂಡಂತಹ ಯಾವುದೇ ದಾಖಲೆಗಳನ್ನು ಹಾಜರುಪಡಿಸದೇ ಇರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ ಹಾಗೂ ಸಲ್ಲಿಸಿರುವ ಹೇಳಿಕೆಯು ಸಮಂಜಸವಾಗಿರದೇ ಜಿಲ್ಲಾ ವೇದಿಕೆಯ ಮೇಲಾಧಿಕಾರಿಗಳ ವಿರುದ್ಧ ಸಕಾರಣಗಳು ಮತ್ತು ದಾಖಲೆಗಳನ್ನು ಒಳಗೊಂಡಿರದ ಆರೋಪದ ರೀತಿಯಾಗಿರುತ್ತದೆ. ಈ ರೀತಿಯ ಹೇಳಿಕೆಯನ್ನು ಪರಿಗಣಿಸಲು ಅಥವಾ ಅಂಗೀಕರಿಸಲು ಯಾವುದೇ ರೀತಿಯ ದಾಖಲೆಗಳು ಇಲ್ಲದೇ ಇರುವುದರಿಂದ ಮತ್ತು ಶ್ರೀಮತಿ ಡಿ.ರಾಜೇಶ್ವರಿ ಇವರು ನಿಗಧಿತ ಕಾಲಾವಧಿಯ ತರುವಾಯ ಸಲ್ಲಿಸಿದ ದಿನಾಂಕ ೨೮-೧೧-೨೦೦೬ರ ಮನವಿಯನ್ನು ದಿನಾಂಕ ೩೦-೧೧-೨೦೦೬ರಂದು ರಾಜ್ಯ ಆಯೋಗಕ್ಕೆ ನಿಗಧಿತ ಕಾಲಾವಧಿ ಮೀರಿ ಸಲ್ಲಿಸಿರುವುದರಿಂದ ಸದರಿ ಮನವಿಗೆ ಯಾವುದೇ ಮನ್ನಣೆ ಅಥವಾ ಪ್ರಾತಿನಿಧ್ಯ ದೊರೆತಿರುವುದಿಲ್ಲ.

ಶ್ರೀಮತಿ ಡಿ.ರಾಜೇಶ್ವರಿ ಇವರು ಕರ್ನಾಟಕ ನಾಗರೀಕ ಸೇವಾ(ಅನುಕಂಪದ ಆಧಾರದ ಮೇಲೆ ನೇಮಕಾತಿ) ನಿಯಮಗಳು ೧೯೯೬ರನ್ವಯ ಅನುಕಂಪದ ಆಧಾರದ ಮೇಲೆ ದ್ವಿತೀಯ ದರ್ಜೆ ಸಹಾಯಕರಾಗಿ ಬಳ್ಳಾರಿ ಜಿಲ್ಲಾ ಗ್ರಾಹಕರ ವೇದಿಕೆಗೆ ನೇಮಕಾತಿ ಹೊಂದಿ ದಿನಾಂಕ ೩-೪-೧೯೯೯ರಿಂದ ಬಳ್ಳಾರಿ ಜಿಲ್ಲಾ ವೇದಿಕೆಯ ಸ್ವೀಕೃತಿ ಮತ್ತು ರವಾನೆ ಶಾಖೆಯ ಕಾರ್ಯನಿರ್ವಹಿಸುವುದರ ಜೊತೆಗೆ ಬಳ್ಳಾರಿ ಜಿಲ್ಲಾ ವೇದಿಕೆಯಲ್ಲಿ ಇತ್ಯರ್ಥವಾದ ಪ್ರಕರಣಗಳ ಇಂಡೆಕ್ಸ್ ಕಾರ್ಯವನ್ನು ನಿರ್ವಹಿಸುವವರಾಗಿರುತ್ತಾರೆ. ಹೀಗೆ ನಿರ್ವಹಿಸಿದಂತಹ ಕಾರ್ಯವನ್ನು ಕಛೇರಿ ಕಾರ್ಯವಿಧಾನ ಕೈಪಿಡಿಯನುಸಾರ ಮತ್ತು ಮೇಲಾಧಿಕಾರಿಗಳ ನಿರ್ದೇಶನದನುಸಾರ ಸಮರ್ಪಕವಾಗಿ ನಿರ್ವಹಿಸದೇ, ಕರ್ತವ್ಯವನ್ನು ನಿಷ್ಠೆ, ದಕ್ಷತೆಯಿಂದ ಯಾವುದೇ ಲೋಪಕ್ಕೆ ಆಸ್ಪದವಿಲ್ಲದಂತೆ ನಿರ್ವಹಿಸಲು ವಿಫಲರಾಗಿರುತ್ತಾರೆಂಬುದು ಶ್ರೀಮತಿ ಡಿ.ರಾಜೇಶ್ವರಿ ಇವರ ವಿರುದ್ಧದ ಆರೋಪಗಳ ಇಲಾಖಾ ವಿಚಾರಣೆಯ ವರದಿಯಿಂದ ಮತ್ತು ಇಲಾಖಾ ವಿಚಾರಣೆ ಸಮಯದಲ್ಲಿ ಪರಿಶೀಲಿಸಿದ ದಾಖಲೆಗಳಿಂದ ಸ್ಪಷ್ಟವಾಗಿರುವುದಲ್ಲದೇ ಜಿಲ್ಲಾ ವೇದಿಕೆಯ ದಾಖಲೆಗಳಿಂದಲೂ ಕೂಡ ಸ್ಪಷ್ಟವಾಗುತ್ತದೆ.

ಶ್ರೀಮತಿ ಡಿ.ರಾಜೇಶ್ವರಿ ಇವರ ೨೦೦೫-೦೬ನೇ ಸಾಲಿನಿಂದ ಹಿಡಿದು ೨೦೦೦-೦೧ನೇ ಸಾಲಿನವರೆಗಿನ ಕಾರ್ಯನಿರ್ವಹಣಾ ವರದಿಗಳಲ್ಲಿಯೂ ಕೂಡ ಸಾಮಾನ್ಯ ಮೌಲ್ಯಮಾಪನವು "ಸಾಧಾರಣ'' ಅಥವಾ "ಸಾಧಾರಣಕ್ಕಿಂತ ಕಡಿಮೆ" ಎಂದು ಇದ್ದು, ಈ ಸಾಮಾನ್ಯ ಮೌಲ್ಯಮಾಪನವನ್ನು ಕರ್ನಾಟಕ ನಾಗರೀಕ ಸೇವಾ(ಕಾರ್ಯನಿರ್ವಹಣಾ ವರದಿಗಳು) ನಿಯಮಗಳು ೨೦೦೦ರನ್ವಯ ಅನುಸರಿಸಬೇಕಾದ ಕ್ರಮವನ್ನು ಅನುಸರಿಸಿಕೊಂಡೇ ಯಥಾವತ್ತಾಗಿ ಅಂಗೀಕರಿಸಲಾಗಿದೆ ಮತ್ತು ಕೆಲವೊಂದು ವರದಿಯನ್ನು ಸಲಹಾತ್ಮಕ ಸ್ವರೂಪದ ವರದಿಯೆಂದು ಕೂಡ ಪರಿಗಣಿಸಲಾಗಿದೆ. ಶ್ರೀಮತಿ ಡಿ.ರಾಜೇಶ್ವರಿ ಇವರು ಅತೀ ಸಾಮಾನ್ಯ ಕೆಲಸವಾದ ಸ್ವೀಕೃತಿ ಮತ್ತು ರವಾನೆ ಶಾಖೆಯ ಕಾರ್ಯವನ್ನು ಹಾಗೂ ಇಂಡೆಕ್ಸ್ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಲು ವಿಫಲರಾಗಿರುತ್ತಾರೆ.

ಶ್ರೀಮತಿ ಡಿ.ರಾಜೇಶ್ವರಿಯವರು ತಮಗೆ ವಹಿಸಿದ ಕಾರ್ಯವನ್ನು ನಿಷ್ಠೆ, ದಕ್ಷತೆಯಿಂದ ನಿರ್ವಹಿಸಲು ಆಸಕ್ತಿ ವಹಿಸದೇ ಅಸಮರ್ಪಕವಾಗಿ ಕಾರ್ಯನಿರ್ವಹಿಸಿರುವುದರಿಂದ ಹಾಗೂ ಕಾರ್ಯನಿರ್ವಹಣೆಯನ್ನು ಉತ್ತಮಗೊಳಿಸಲು ತಿಳುವಳಿಕೆ ನೀಡಿದ ಮೇಲಾಧಿಕಾರಿಗಳ ವಿರುದ್ಧ ಅಲ್ಲಸಲ್ಲದ ಆರೋಪಗಳನ್ನು ಮಾಡುತ್ತಾ, ಜಿಲ್ಲಾ ಗ್ರಾಹಕರ ವೇದಿಕೆಯ ಕಾರ್ಯನಿರ್ವಹಣೆಗೆ ಯಾವುದೇ ರೀತಿಯಲ್ಲಿ ಸಂಬಂಧವಲ್ಲದ ಹಾಗೂ ಸರ್ಕಾರಿ ನೌಕರರು ಯಾವುದೇ ರೀತಿಯಲ್ಲಿ ಯಾವುದೇ ವ್ಯಕ್ತಿಗಳಿಂದ ಒತ್ತಡ ತರದೇ ಕಾರ್ಯನಿರ್ವಹಿಸಬೇಕಾದ ಸಂದರ್ಭದಲ್ಲಿ ಶ್ರೀಮತಿ ಡಿ.ರಾಜೇಶ್ವರಿ ಇವರು ದಲಿತ ಸಂಘರ್ಷ ಸಮಿತಿಯ ಶ್ರೀ ವೆಂಕಟೇಶ್‌ಲುರವರು ಮತ್ತು ಇತರರನ್ನು ದಿನಾಂಕ ೨೪-೩-೨೦೦೬ರಂದು ಸಂಜೆ ೪-೩೦ ಗಂಟೆಗೆ ಸುಮಾರಿನಲ್ಲಿ ಬಳ್ಳಾರಿ ಜಿಲ್ಲಾ ವೇದಿಕೆಗೆ ಕನಪ್ಪಿಹಿಸಿ ಬಳ್ಳಾರಿ ಜಿಲ್ಲಾ ವೇದಿಕೆಯ ಶಿರಸ್ತೇದಾರರಾದ ಶ್ರೀ ಪಿ.ಎಸ್ ಅಮರದೀಪ್ ಇವರಿಗೆ ಅವ್ಯಾಚ್ಯ ಶಬ್ದಗಳಿಂದ ನಿಂದಿಸಿರುವುದಲ್ಲದೇ ದಿನಾಂಕ ೫-೪-೨೦೦೬ರಂದು ಶ್ರೀಮತಿ ಡಿ.ರಾಜೇಶ್ವರಿ ಇವರ ಸಂಬಂಧಿಕರಾದ ಶ್ರೀ ರಂಗಸ್ವಾಮಿ ಎಂಬುವವರನ್ನು ಬಳ್ಳಾರಿ ಜಿಲ್ಲಾ ವೇದಿಕೆಗೆ ಕನಪ್ಪಿಹಿಸಿ ಬಳ್ಳಾರಿ ಜಿಲ್ಲಾ ವೇದಿಕೆಯ ಸಿಬ್ಬಂದಿಯ ಮೇಲೆ ಒತ್ತಡ ತಂದಿರುವುದು ಇಲಾಖಾ ವಿಚಾರಣೆಯಲ್ಲಿ ಶ್ರೀ ಕೆ.ಎಂ ಅಸ್ಲಾಂ ಪಾಷ, ಸಹಾಯಕ ರಿಜಿಸ್ಟ್ರಾರ್ ಮತ್ತು ಸಹಾಯಕ ಆಡಳಿತಾಧಿಕಾರಿಗಳು ಇವರ ಸಾಕ್ಷಿಯಿಂದ ಹಾಗೂ ನಿಶಾನೆ ಪಿ೧ ರಿಂದ ನಿಶಾನೆ ಪಿ೧೩ರ ಮೂಲಕ ನಿಸ್ಸಂದೇಹವಾಗಿ ರುಜುವಾತಾಗಿರುತ್ತದೆ ಹಾಗೂ ಶ್ರೀಮತಿ ಡಿ.ರಾಜೇಶ್ವರಿ ಇವರೇ ದಿನಾಂಕ ೨೬-೫-೨೦೦೬ರಂದು ಸಲ್ಲಿಸಿರುವ ಮನವಿಯಲ್ಲಿ "ಡಿ.ಎಸ್.ಎಸ್ ಸಂಘದ ಪದಾಧಿಕಾರಿಗಳು ಬಂದು ಕಛೇರಿಯ ಸಿಬ್ಬಂದಿಯನ್ನು ವಿಚಾರಿಸಿದ ವಿಷಯ ತಪ್ಪೆಂದು" ಒಪ್ಪಿಕೊಂಡಿರುತ್ತಾರೆ. ಹೀಗಾಗಿ, ಶ್ರೀಮತಿ ಡಿ.ರಾಜೇಶ್ವರಿ, ದ್ವಿತೀಯ ದರ್ಜೆ ಸಹಾಯಕರು ಇವರು ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಗಳು ೧೯೬೬ರ ೩ನೇ ನಿಯಮದ ೧ನೇ ಉಪ ನಿಯಮದ (i) ಮತ್ತು (ii)ನೇ ಖಂಡಗಳನ್ನು ಉಲ್ಲಂಘಿಸಿರುವುದು ಹಾಗೂ ಕರ್ನಾಟಕ ನಾಗರೀಕ ಸೇವಾ(ವರ್ತನೆ) ನಿಯಮಗಳು ೧೯೬೬ರ ೩ನೇ ನಿಯಮದ ೧ನೇ ಉಪ ನಿಯಮದ (iii)ನೇ ಖಂಡವನ್ನು ಮತ್ತು ನಿಯಮ ೨೬ನ್ನು ಉಲ್ಲಂಘಿಸಿರುವುದು ನಿಸ್ಸಂದೇಹವಾಗಿ ರಜುವಾತಾಗಿರುವುದಲ್ಲದೇ ಶ್ರೀಮತಿ ಡಿ.ರಾಜೇಶ್ವರಿ ಇವರು ಸರ್ಕಾರಿ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುವುದರ ಬದಲು ಸರ್ಕಾರಿ ನೌಕರನು ನಿರ್ವಹಿಸದ/ಮಾಡಿಸಬಾರದ ಕೆಲಸವನ್ನು ಅನ್ಯ ವ್ಯಕ್ತಿಗಳಿಂದ ಮಾಡಿಸಿ ಘೋರ ಸ್ವರೂಪದ ಅಪರಾಧವನ್ನು ಎಸಗಿರುತ್ತಾರೆ ಮತ್ತು ಸಮರ್ಪಕವಾಗಿ ಕಾರ್ಯನಿರ್ವಹಿಸಲು ವಿಫಲರಾಗಿರುತ್ತಾರೆ. ಹೀಗೆ ಶ್ರೀಮತಿ ಡಿ.ರಾಜೇಶ್ವರಿ ಇವರು ಘೋರ ಸ್ವರೂಪದ ಅಪರಾಧವನ್ನು ಎಸಗಿರುವುದರಿಂದ ಮತ್ತು ಸರ್ಕಾರೀ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸಲು ಸಂಪೂರ್ಣವಾಗಿ ವಿಫಲರಾಗಿರುವ ಸಂಬಂಧಪಟ್ಟ ನೌಕರರನ್ನು ಸೇವೆಯಲ್ಲಿರಿಸಿಕೊಂಡು, ಕಾರ್ಯನಿರ್ವಹಿಸಿಕೊಳ್ಳುವುದು ಸುಗಮವೂ, ನ್ಯಾಯೋಚಿತವೂ ಮತ್ತು ಸಮರ್ಪಕವೂ ಅಲ್ಲವಾದ್ದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

ಆದೇಶ ಸಂಖ್ಯೆ:ಕರಾಆ:ಆಡಳಿತ:ದ್ವಿದಸ:೧೦:೯ ಬೆಂಗಳೂರು, ದಿನಾಂಕ ೭ನೇ ಡಿಸೆಂಬರ್ ೨೦೦೬

ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಗ್ರೂಪ್ 'ಡಿ' ಮತ್ತು ಗ್ರೂಪ್ 'ಸಿ' ವೃಂದದ ನೇಮಕಾತಿ ಪ್ರಾಧಿಕಾರ, ಶಿಸ್ತು ಪ್ರಾಧಿಕಾರ ಹಾಗೂ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರಾದ ನ್ಯಾಯಮೂರ್ತಿ ಚಂದ್ರಶೇಖರಯ್ಯ ಆದ ನಾನು, ನನಗೆ ನಿಯಮಾನುಸಾರ ದತ್ತವಾಗಿರುವ ಅಧಿಕಾರದಡಿಯಲ್ಲಿ ಶ್ರೀಮತಿ ಡಿ.ರಾಜೇಶ್ವರಿ, ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ರಾಯಚೂರು ಇವರನ್ನು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೮(VII)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಿಂದ ವಜಾ ಮಾಡಲಾಗಿದೆ.

ಶ್ರೀಮತಿ ಡಿ.ರಾಜೇಶ್ವರಿ ಇವರನ್ನು ರಾಯಚೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಿಂದ ಕೂಡಲೇ ಕರ್ತವ್ಯದಿಂದ ಬಿಡುಗಡೆ ಮಾಡಿ ಕರ್ನಾಟಕ ರಾಜ್ಯ ಗ್ರಾಹಕರ ಆಯೋಗಕ್ಕೆ ವರದಿಯನ್ನು ಸಲ್ಲಿಸಲು ರಾಯಚೂರು ಜಿಲ್ಲಾ ವೇದಿಕೆಯ ಅಧ್ಯಕ್ಷರಿಗೆ ಸೂಚಿಸಿದೆ.

ನ್ಯಾಯಮೂರ್ತಿ ಚಂದ್ರಶೇಖರಯ್ಯ,
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು ಹಾಗೂ ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ ಆಯೋಗ
ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ನೇಮಕಾತಿ ಪ್ರಾಧಿಕಾರಿ
ಮತ್ತು ಶಿಸ್ತು ಪ್ರಾಧಿಕಾರಿ.

ಪಿ.ಆರ್. 1703

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಕೆಗಳು

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಗೇರಿ ಗ್ರಾಮದಲ್ಲಿ ಪಿಂಕ್ ಗ್ರಾನೈಟ್‌ಗಾಗಿ ಮೆ: ಹೆಚ್.ಜಿ.ಎಸ್. ಸ್ಟೋನ್ಸ್ ಲಿ., ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 577ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುತ್ತಿರುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು 577:2006-07 2710 ದಿನಾಂಕ:6.9.2006.
2. ಹಿರಿಯ ಭೂವಿಜ್ಞಾನಿ, ಕೊಪ್ಪಳ ರವರ ಪತ್ರ ಸಂಖ್ಯೆ:ಹಿಭೂವಿ:ಕೊಖವಿ ಗಭೂಇ:ಡಿಸಿಬಿ:ಕಗಗು:277:2006-07: 948 ದಿನಾಂಕ:23.5.2006.
3. ಪತ್ರ ಸಂಖ್ಯೆ:ಗಭೂಇ:ಡಿಸಿಬಿ:ಕಗಗು 577:2005-06:5857 ದಿ:26.12.2005.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಹುಲಗೇರಿ ಗ್ರಾಮದ ಸರ್ವೆ ನಂ.48/8 ರಲ್ಲಿ ಮೆ: ಹೆಚ್.ಜಿ.ಎಸ್. ಸ್ಟೋನ್ಸ್ ಲಿ., ರವರಿಗೆ 2.20 ಎಕರೆಗೆ ದಿನಾಂಕ:4.3.003 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಂತೆ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2006ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,14,743/- ಗಳನ್ನು ಪಾವತಿಸುವಂತೆ ಹಾಗೂ ಗುತ್ತಿಗೆ ನಿಷ್ಕ್ರಿಯಗೊಳಿಸಿರುವ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿತ್ತು.

ಗುತ್ತಿಗೆದಾರರು ಈವರೆವಿಗೂ ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟಿಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರಗಳಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಹಾಗೂ ಬಾಕಿ ರೂ.1,14,743/- ಅನ್ನು ಪಾವತಿಸಿರದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಉಲ್ಲಂಘನೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

### ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:577:2006-07, 10675, ದಿನಾಂಕ: 5ನೇ ಡಿಸೆಂಬರ್ 2006

ಸರ್ಕಾರಿ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ ಆರ್ ಸಿ 92 ದಿನಾಂಕ: 2.7.1994 ರಲ್ಲಿ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರವನ್ನು ಬಳಸಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ, ಹುಲಗೇರಿ ಗ್ರಾಮದ ಸರ್ವೆ ನಂ.48/8 ರಲ್ಲಿ 2.20 ಎಕರೆಗೆ ಪಿಂಕ್ ಗ್ರಾನೈಟ್‌ಗಾಗಿ ಮೆ: ಹೆಚ್.ಜಿ.ಎಸ್. ಸ್ಟೋನ್ಸ್ ಲಿ., ರವರ ಹೆಸರಿನಲ್ಲಿನ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:577 ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ನಿರ್ದೇಶಕರು,

ಪಿ.ಆರ್. 1700 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

## ಜಿಲ್ಲಾ ನ್ಯಾಯಾಧೀಶ (ನಿವೃತ್ತ) ಶ್ರೀ ಟಿ.ಎಸ್. ಪಾಲನೇತ್ರರವರ ಇಲಾಖಾ ವಿಚಾರಣಾ ಪ್ರಾಧಿಕಾರ (ವಿಶೇಷ ನೇಮಕಾತಿ), ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು-560 009

### ಸಂಖ್ಯೆ: 16/2006, ದಿನಾಂಕ: 27ನೇ ನವೆಂಬರ್ 2006

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿತ ಅಧಿಕಾರಿಗಳು** |
|---|---|---|
| ಕನಾಟಕ ಸರ್ಕಾರದ ಪರವಾಗಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು. | | ವೈದ್ಯ ಗಂಗಾಧರ್ ಡಿ. ಡಬೋಲಿ ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು-2 |

### ಅಂತಿಮ ತಿಳುವಳಿಕೆ ಪತ್ರ

ಡಾ: ಗಂಗಾಧರ್ ಡಿ ಡಬೋಲಿ, ಉಪನ್ಯಾಸಕರು, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಆದ ನೀವು ದಿ:5.5.2005 ರಿಂದ ತಹಲ್‌ವರೆಗೆ ಕರ್ತವ್ಯದ ಮೇಲೆ ಅನಧಿಕತ ಗೈರು ಹಾಜರಾಗಿರುವುದಲ್ಲದೆ, ನೀವು ನಿರ್ವಹಿಸುತ್ತಿದ್ದ ವೈದ್ಯಕೀಯ ಕಾಲೇಜಿನ ಉಪನ್ಯಾಸಕರ ಹುದ್ದೆಗೂ ನಿರ್ಲಕ್ಷತನ ತೋರಿ, ಬೆಂಗಳೂರು ವೈದ್ಯಕೀಯ ಮಹಾ ವಿದ್ಯಾಲಯದ ಮತ್ತು ಈ ವಿದ್ಯಾಲಯಕ್ಕೆ ಸೇರಿದ ಆಸ್ಪತ್ರೆಯ ದೈನಂದಿನ ಕೆಲಸ ಕಾರ್ಯಗಳಿಗೆ ಅಡಚಣೆ ಉಂಟುಮಾಡಿ ತುಂಬಲಾರದ ನಷ್ಟ ಉಂಟು ಮಾಡಿರುತ್ತೀರಿ. ಈ ಬಗ್ಗೆ ವೈದ್ಯಕೀಯ ಕಾಲೇಜಿನಿಂದ ನಿಮಗೆ ಕಳೂಹಿಸಿದ ತಿಳುವಳಿಕೆ ನೋಟೀಸು ಜಾರಿಯಾಗದೆ ವಾಪಸ್ಸು ಬಂದಿರುತ್ತದೆ.

ಈ ಬಗ್ಗೆ ಸರ್ಕಾರ ನಿಮ್ಮ ಅನಧಿಕತ ಗೈರುಹಾಜರಾತಿ ಬಗ್ಗೆ ಶಿಸ್ತು ಕ್ರಮ ಜರುಗಿಸಲು ಆದೇಶ ಸಂಖ್ಯೆ: ಆಕುಕ 201 ಎಂಎಂಸಿ 2005 ದಿ:18.9.2006 ರಲ್ಲಿ ವಿಚಾರಣಾ ಪ್ರಾಧಿಕಾರ ರಚಿಸಿರುತ್ತದೆ.

ಈ ಬಗ್ಗೆ ನಿಮ್ಮ ವಿರುದ್ಧ ಅನಧಿಕೃತ ಗೈರುಹಾಜರಾತಿನ ಬಗ್ಗೆ ವಿಚಾರಣಾ ಕ್ರಮ ಜರುಗಿಸಲು ನೀವು ಕಾರ್ಯ ನಿರ್ವಹಿಸುತ್ತಿದ್ದ ಬೆಂಗಳೂರು ವೈದ್ಯಕೀಯ ಕಾಲೇಜು ವಿಳಾಸಕ್ಕೂ ಹಾಗೂ ನಿವು ತಿಳಿಸಿದ ಗೃಹ ವಿಳಾಸಕ್ಕೂ ಅಂಚೆ ನೊಂದಣಿ ಸ್ವೀಕೃತಿ ಬಾಕಿ ಮುಖೇನ ನೋಟೀಸು ರವಾನಿಸಲಾಗಿತ್ತು. ಅದು ನಿಮ್ಮಿಂದ ಸ್ವೀಕೃತವಾಗದೆ ಹಿಂತಿರುಗಿ ಬಂದಿದ್ದು, ಅವುಗಳನ್ನು ಸಂಬಂಧಪಟ್ಟ ಕಡತದಲ್ಲಿ ದಾಖಲಿಸಲಾಗಿದೆ. ನೀವು ತಹಲ್‌ವರೆವಿಗೂ ವಿಚಾರಣಾ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ಆದ್ದರಿಂದ, ಅಂತಿಮವಾಗಿ, ಈ ನೋಟೀಸು ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟವಾದ ಒಂದು ತಿಂಗಳಲ್ಲಿ ಮೇಲೆ ನಮೂದಿಸಿದ ವಿಚಾರಣಾ ಪ್ರಾಧಿಕಾರದ ಮುಂದೆ ಹಾಜರಾಗಿ, ವಿಚಾರಣೆಲ್ಲಿ ಭಾಗವಹಿಸತಕ್ಕದ್ದು ತಪ್ಪಿದಲ್ಲಿ, ನಿಮ್ಮ ಹೇಳಿಕೆ ಏನೂ ಇರುವುದಿಲ್ಲವೆಂದು ಭಾವಿಸಿ, ವಿಚಾರಣೆಯನ್ನು ಏಕ-ಪಕ್ಷೀಯವಾಗಿ, ಮುಂದಿನ ಕ್ರಮ ಜರುಗಿಸಿ, ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲಾಗುವುದು.

**ಟಿ.ಎಸ್. ಪಾಲನೇತ್ರ**

ಪಿ.ಆರ್. 1702 ವಿಚಾರಣಾಧಿಕಾರಿ

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬೆಂಗಳೂರು ವಿಭಾಗ-4, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 560 029

**ಪ್ರಕರಣ ಸಂಖ್ಯೆ: ಸಕಾಅಬೆಂ4/ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-89/2006-07, ದಿನಾಂಕ: 22ನೇ ನವೆಂಬರ್ 2006**

**ಅರ್ಜಿದಾರರು:** ಶ್ರಿ ಗೋವಿಂದ ಗೌಡ ಗುರಿಗಾರಟ ಪಾಳ್ಯ ಶ್ರವಣಬೆಳಗೊಳ ಚೆನ್ನರಾಯಪಟ್ಟಣ ಹಾಸನ.

**ವಿರುದ್ಧ**

**ಪ್ರತಿವಾದಿಗಳು:** ಮೆ॥ ರಾಧಾಕೃಷ್ಣ ಹಾಸಪಿಟಲಿಟಿ ಸರ್ವಿಸಸ್ ಪ್ರೈಲಿ. ಎಂ.ಐ.ಜಿ. 109, ಕೆ.ಹೆಚ್.ಬಿ. ಕಾಲೋನಿ, 17ನೇ, 1ನೇ ಮುಖ್ಯ 5ನೇ ಬ್ಲಾಕ್, ಕೋರಮಂಗಲ, ಬೆಂಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ದಿವಂಗತ ಶ್ರೀ ಕಾಂತರಾಜು ಜಿ.ಜಿ. ರವರು ಅರ್ಜಿದಾರರಲ್ಲಿ ಕಾರ್ಮಿಕನಾಗಿ ಕೆಲಸದ ಮೇಲೆ ಇದ್ದಾಗ, ದಿನಾಂಕ: 30.08.06 ರಂದು ವಿದ್ಯುತ್ ವೈರ್ ತಗುಲಿ ಅಪಘಾತ ಸಂಭವಿಸಿ, ನಂತರ ಮೃತರಾಗಿರುತ್ತಾರೆ.

ಮೃತರು ಅರ್ಜಿದಾರರ ಕಡೆ ಕೆಲಸದಲ್ಲಿರುವ ಕಾರಣ, ಪ್ರತಿವಾದಿಗಳಿಗೆ ಅರ್ಜಿದಾರರು ಪರಿಹಾರ ಹಣ ನೀಡುವ ಬಗ್ಗೆ ದಿನಾಂಕ: 27.9.06 ರಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯಪತ್ರಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜೆ.ಎಂ. ಜಯದೇವಯ್ಯ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಸಹಾಯಕ ಕಾರ್ಮಿಕ ಆಯುಕ್ತರು, ಬೆಂಗಳೂರು ವಿಭಾಗ-4, ಬೆಂಗಳೂರು.

ಪಿ.ಆರ್. 1680

## ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು-22, ಇವರ ಕಛೇರಿ ನಡಾವಳಿ

**ಉಪಸ್ಥಿತರು:** ಶ್ರೀ ಕೆ.ಟಿ. ಹಾಲಸ್ವಾಮಿ,
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ)

**ವಿಷಯ:** ವಾಹನ ಸಂಖ್ಯೆ: MYA-2098 (ಎ/ಆರ್)ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1. ಮಾಲೀಕರ ಅರ್ಜಿ ದಿನಾಂಕ: 19.10.2006.
2. ಮೋ.ವಾ.ನಿ. ರವರ ವರದಿ ದಿನಾಂಕ: 4.11.2006.

**ಪ್ರಸ್ತಾವನೆ:**

ವಾಹನ ಸಂಖ್ಯೆ: MYA-2098ರ ಮಾಲೀಕರಾದ ಶ್ರೀ ವಿ.ವಿ. ರಾಮಾನುಜ, ಬಿನ್ ಲೇಟ್ ವಿ.ಆರ್. ವೇಣುಗೋಪಾಲ್, ನಂ. 59, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-3, ರವರು ದಿ: 19.10.2006 ರಂದು ಈ ಕಛೇರಿಗೆ ಅರ್ಜಿ ಅರ್ಜಿ ಸಲ್ಲಿಸಿ, ವಾಹನವು ದುರಸ್ತಿ ಮಾಡಲಾರದ ಸ್ಥಿತಿಯಲ್ಲಿರುವುದರಿಂದ ನೋಂದಣಿಯನ್ನು ರದ್ದುಪಡಿಸಲು ಅನುಮತಿ ಕೋರಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ: 4.11.2006 ರಂದು ವರದಿ ಸಲ್ಲಿಸಿದ್ದು, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ದುಪಡಿಸಬಹುದು ಎಂದು ಶಿಫಾರಸ್ಸು ಮಾಡಿರುತ್ತಾರೆ. ವಾಹನಕ್ಕೆ ತೆರಿಗೆಯನ್ನು ಜೀವಾವಧಿವರೆಗೆ ಪಾವತಿಸಿದೆ. ಈ ಮೇಲ್ಕಂಡ ಕಾರಣಗಳಿಂದ ಮೋಟಾರು ವಾಹನ ಸಂಖ್ಯೆ: MYA-2098ರ ನೋಂದಣಿಯನ್ನು ರದ್ದುಮಾಡಿ ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ: ಪ್ರಾ.ಸಾ.ಅ./ಬೆಂ(ಉ)./MYA-2098/06-07, ದಿನಾಂಕ: 8ನೇ ನವೆಂಬರ್ 2006**

ಕೇಂದರ ಮೋಟಾರು ವಾಹನ ಕಾಯ್ದೆ 1988ರ ವಿಧಿ 55 (2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಟಿ. ಹಾಲಸ್ವಾಮಿ, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಕಾರಣಗಳಿಂದಾಗಿ, ಮೋಟಾರು ವಾಹನ ಸಂಖ್ಯೆ: MYA=2098 ರ ಮೇಲೆ ಏನಾದರೂ ತೆರಿಗೆ, ಆಡಿಟ್ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಮಾಡಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1 | ಮೋಟಾರು ವಾಹನ ಸಂಖ್ಯೆ | MYA-2098 |
| 2 | ವಾಹನದ ನೋಂದಣಿ ದಿನಾಂಕ | 02.01.1970 |
| 3 | ವಾಹನದ ತಯಾರಕನ ಹೆಸರು | Vespa |
| 4 | ವಾಹನದ ಮಾದರಿ | Autorickshaw Cab |
| 5 | ವಾಹನ ತಯಾರಿಕೆ ವರ್ಷ | 1969 |
| 6 | ಚಾಸಿಸ್ ಸಂಖ್ಯೆ | A13311T 13492 |
| 7 | ಇಂಜಿನ್ ಸಂಖ್ಯೆ | A133IIM 1277 |
| 8 | ಅಶ್ವ ಶಕ್ತಿ | 1.5 HP |
| 9 | ಆಸನ ಸಾಮರ್ಥ್ಯ | 3+1=4 in all |
| 10 | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ವಿ.ವಿ. ರಾಮಾನುಜ, ಬಿನ್ ಲೇಟ್ ವಿ.ಆರ್. ವೇಣುಗೋಪಾಲ್, ನಂ. 59, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-3 |

**ಕೆ.ಟಿ. ಹಾಲಸ್ವಾಮಿ**
ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ)

ಪಿ.ಆರ್. 1685

## ಪೊಲೀಸ್ ಕಮೀನಷರ್‌ರವರ ಕಛೇರಿ, ಬೆಂಗಳೂರು ನಗರ

**ಅಧಿಸೂಚನೆ**

**ಸಂಖ್ಯೆ: 294/ಸಂ.ವಿ./ಸಿ.ಒ.ಪಿ/2006, ದಿನಾಂಕ: 7ನೇ ನವೆಂಬರ್ 2006**

ಬೆಂಗಳೂರು ನಗರದ ಆರ್.ಟಿ.ನಗರ ಸಂಚಾರ ಪೊಲೀಸ್ ಠಾಣೆಯ ಸರಹದ್ದಿಗೆ ಸೇರಿದ ನ್ಯೂ ಬಿ.ಇ.ಎಲ್. ರಸ್ತೆಯು ದ್ವಿಮುಖ ಸಂಚಾರವುಳ್ಳ ಕಿರಿದಾದ ರಸ್ತೆಯಾಗಿದ್ದು, ಇತ್ತೀಚೆಗೆ ಸಂಚಾರ ಒತ್ತಡ ಹೆಚ್ಚಾಗಿದ್ದು, ದಿನ ನಿತ್ಯ ಬಿ.ಇ.ಎಲ್. ಕಾರ್ಖಾನೆ, ಹೆಚ್.ಎಂ.ಟಿ. ಕಾರ್ಖಾನೆ, ಇಸ್ರೋ, ಎಂ.ಎಸ್.ರಾಮಯ್ಯ ಆಸ್ಪತ್ರೆ ಹಾಗೂ ಇಂಜಿನಿಯರಿಂಗ್ ಕಾಲೇಜಿಗೆ ಸಂಬಂಧಿಸಿದ ವಾಹನಗಳು ಸಂಚರಿಸುತ್ತಿದ್ದು, ಸದರಿ ರಸ್ತೆಯ ಪಕ್ಕದಲ್ಲಿ ವಾಹನಗಳ ನಿಲುಗಡೆ ಮಾಡುತ್ತಿರುವುದರಿಂದ ಆಗಿಂದಾಗ್ಗೆ ಸಂಚಾರ ಸ್ಥಗಿತಗೊಂಡು ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿರುತ್ತದೆ. ಆದ್ದರಿಂದ ಹಾಲಿ ಇರುವ ರಸ್ತೆಯ ಉಭಯ ಪಾರ್ಶ್ವಗಳ ನಿಲುಗಡೆಯನ್ನು ನಿಷೇದಿಸಿ, ಕ್ರಾಸ್ ರಸ್ತೆಗಳಲ್ಲಿ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿದಲ್ಲಿ ಸುಗಮ ಸಂಚಾರಕ್ಕೆ ಅನುಕೂಲ ಮಾಡಿದಂತಾಗುತ್ತದೆ.

ಆದುದರಿಂದ ನ್ಯೂ ಬಿ.ಇ.ಎಲ್. ರಸ್ತೆಯಲ್ಲಿ ಸದಾಶಿವನಗರ ಪೊಲೀಸ್ ಠಾಣಾ ಜಂಕ್ಷನ್‌ನಿಂದ ರೈಲ್ವೆ ಬ್ರಿಡ್ಜ್‌ವರೆಗೂ ಉಭಯ ಪಾರ್ಶ್ವಗಳಲ್ಲಿ ಎಲ್ಲಾ ತರಹದ ವಾಹನಗಳ ನಿಲುಗಡೆಯನ್ನು ಶಾಶ್ವತವಾಗಿ ನಿಷೇದಿಸಿ, ಕ್ರಾಸ್ ರಸ್ತೆಗಳಲ್ಲಿ ಮಾತ್ರ ವಾಹನಗಳ ನಿಲುಗಡೆಗೆ ಅವಕಾಶವನ್ನು ಕಲ್ಪಿಸುವುದು ಅತ್ಯವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯಿದೆ 1988 ಹಾಗೂ ಕಲಂ 3, ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ಬೆಂಗಳೂರು ನಗರದ ಪೊಲೀಸ್ ಕಮೀಷನರ್, ಶ್ರೀ ಎನ್. ಅಚ್ಯುತರಾವ್, ಐ.ಪಿ.ಎಸ್, ಆದ ನಾನು ಈ ಕೆಳಕಂಡ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

"ನ್ಯೂ ಬಿ.ಇ.ಎಲ್. ರಸ್ತೆಯಲ್ಲಿ ಸದಾಶಿವನಗರ ಪೊಲೀಸ್ ಠಾಣೆ ಜಂಕ್ಷನ್‌ನಿಂದ ರೈಲ್ವೆ ಬ್ರಿಡ್ಜ್‌ವರೆವಿಗೂ ಉಭಯ ಪಾರ್ಶ್ವಗಳಲ್ಲಿ ಎಲ್ಲಾ ತರಹದ ವಾಹನಗಳ ನಿಲುಗಡೆಯನ್ನು ಶಾಶ್ವತವಾಗಿ ನಿಷೇದಿಸಿದ್ದು, ಕ್ರಾಸ್ ರಸ್ತೆಗಳಲ್ಲಿ ಮಾತ್ರ ವಾಹನಗಳ ನಿಲುಗಡೆಗೆ ಅವಕಾಶವನ್ನು ಕಲ್ಪಿಸಲಾಗಿದೆ".

ಅಂತೆಯೇ 1988ನೇ ಮೋಟಾರು ವಾಹನ ಕಾಯ್ದೆ ಕಲಂ 116 ಹಾಗೂ 1960ನೇ ಕರ್ನಾಟಕ ಸಂಚಾರ ನಿಯಂತ್ರಣ ಕಾಯ್ದೆ ಕಲಂ 4 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಅಗತ್ಯವಾದ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಹಾಕಿಸಲು ಸ್ಥಳೀಯ ಪೊಲೀಸ್‌ರವರಿಗೆ ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ: 8.11.2006 ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1597 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ:ಕಾನಪ:ಡಿವಿಜಿ:ಸಿಆರ್-90:2006 ದಿನಾಂಕ: 3ನೇ ನವೆಂಬರ್ 2006**

**ಅರ್ಜಿದಾರರು:**

1) ಶ್ರೀಮತಿ ಜಯಮ್ಮ ಕೋಂ ಲೇಟ್ ವೆಂಕಟೇಶಪ್ಪ, 35 ವರ್ಷ, ಮನೆ ಕೆಲಸ, 23 ಜನರು
ವಾಸ: ಕೆಂಗವಲ್ಲಿ ಗ್ರಾಮ, ಹೊಸದುರ್ಗ ತಾಲ್ಲೂಕು
ಈಗಿನ ವಿಳಾಸ: ಆವರಗೆರೆ ಗ್ರಾಮ, ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು:**

1) ಕೆ.ಎಸ್. ಬಸವಲಿಂಗಪ್ಪ ಬಿನ್ ಸಿದ್ದಪ್ಪ, ಟ್ರಾಕ್ಟರ್ ಟ್ರೇಲರ್ ಮಾಲೀಕರು, ನಂ.ಕೆಎ-16-ಟಿ-420-421, ಕೆಂಗವಲ್ಲಿ ಗ್ರಾಮ, ಹೊಸದುರ್ಗ ತಾಲ್ಲೂಕು.
ದಿ ಬ್ರ್ಯಾಂಚ್ ಮ್ಯಾನೇಜರ್, ಬಜಾಜ್ ಅಲಾಯಿನ್ ಜನರಲ್ ಇನ್ಸೂರೆನ್ಸ್ ಕಂ. ಲಿ., ವಿವೇಕಾನಂದ ಕಾರ್ನರ್, ದೇಸಾಯಿ ಕ್ರಾಸ್, ಕ್ಲಬ್ ರೋಡ್, ಹುಬ್ಬಳ್ಳಿ.

**ಪ್ರಕಟಣೆ**

ಶೀಮತಿ ಜಯಮ್ಮ ಕೋಂ ಲೇಟ್ ವೆಂಕಟೇಶಪ್ಪ (2) ವನಜಾಕ್ಷಮ್ಮ ಮಗಳು ಲೇಟ್ ವೆಂಕಟೇಶಪ್ಪ (3) ಯೋಗೀಶ್ ಬಿನ್ ಲೇಟ್ ವೆಂಕಟೇಶಪ್ಪ (4) ತಮ್ಮಯ್ಯ ಬಿನ್ ಲೇಟ್ ವೆಂಕಟೇಶಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ವೆಂಕಟೇಶಪ್ಪ ರವರು ಒಂದನೇ ಪ್ರತಿವಾದಿಗಳಾದ ಕೆ.ಎಸ್.ಬಸವಲಿಂಗಪ್ಪ ಇವರ ಟ್ರಾಕ್ಟರ್ ಟ್ರೇಲರ್ ನಲ್ಲಿ ಲೋಡರ್ ಮತ್ತು ಅನ್‌ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1592 ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರಕರಣ ಸಂಖ್ಯೆ: ಸಕಾಅದಾ:ಕಾನಪ:ಡಿವಿಜಿ:ಸಿಆರ್–91:2006 ದಿನಾಂಕ: 3ನೇ ನವೆಂಬರ್ 2006**

**ಅರ್ಜಿದಾರರು:**

ಶ್ರೀ ಎಂ.ಬಸಪ್ಪ ಬಿನ್ ವೀರಬಸಪ್ಪ, 68 ವರ್ಷ ಹಾಗೂ ಇತರರು
ವಾಸ: ಮೌನೇಶ್ವರಿ ಬಡಾವಣೆ, ನಿಟವಳ್ಳಿ, ದಾವಣಗೆರೆ

**ಪ್ರತಿವಾದಿಗಳು:**

1) ಯಲ್ಲಪ್ಪ ಬಿನ್ ರಾಮಪ್ಪ, ತರಗಾರ ಮೇಸ್ತ್ರಿ 42 ವರ್ಷ ಹೊಸ ಪೊಲೀಸ್ ಕ್ವಾರ್ಟಸ್ ಹಿಂಭಾಗ, ಜೋಳಿ ಕಾಂಪೌಂಡ್, ಪಿ.ಜಿ. ಬಡಾವಣೆ, ದಾವಣಗೆರೆ.
2) ಚನ್ನಬಸಪ್ಪ, ಕಟ್ಟಡ ಮಾಲೀಕರು, 2ನೇ ಬಸ್‌ಸ್ಟಾಪ್ ಹತ್ತಿರ, ವಿದ್ಯಾನಗರ, ದಾವಣಗೆರೆ.

**ಪ್ರಕಟಣೆ**

ಶ್ರೀ ಎಂ.ಬಸಪ್ಪ, ಶ್ರೀಮತಿ ಗಂಗಮ್ಮ, ಶ್ರೀಮತಿ ಶಕುಂತಲಮ್ಮ ಕೋಂ ಲೇಟ್ ರಾಜು ಯಾನೆ ಷಣ್ಮುಖಪ್ಪ ಇವರ ತಂದೆ, ತಾಯಿ ಮತ್ತು ಹೆಂಡತಿ ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಾಜುಯಾನೆ ಷಣ್ಮುಖಪ್ಪ ರವರು ಒಂದನೇ ಪ್ರತಿವಾದಿಗಳಾದ ಯಲ್ಲಪ್ಪ ಬಿನ್ ರಾಮಪ್ಪ ಇವರ ಅಂತಸ್ತಿನ ಕಟ್ಟಡದಲ್ಲಿ ಕಾರ್ಮಿಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1593

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರಕರಣ ಸಂಖ್ಯೆ: ಸಕಾಅದಾ:ಕಾನಪ:ಡಿವಿಜಿ:ಸಿಆರ್–92:2006 ದಿನಾಂಕ: 4ನೇ ಡಿಸೆಂಬರ್ 2006**

**ಅರ್ಜಿದಾರರು:**

1) ಶ್ರೀಮತಿ ಚೌಡಮ್ಮ ಕೋಂ ಲೇಟ್ ಕೃಷ್ಣಪ್ಪ, 24 ವರ್ಷ
2) ರಮೇಶ್ ಬಿನ್ ಲೇಟ್ ಕೃಷ್ಣಪ್ಪ, 4 ವರ್ಷ
3) ರಂಜಿತಾ ಮಗಳು ಲೇಟ್ ಕೃಷ್ಣಪ್ಪ, 1 1/2 ವರ್ಷ
ಇವರೆಲ್ಲರ ವಾಸ: ದೊಡ್ಡಅಬ್ಬೀಗೆರೆ ವಿಲೇಜ್, ಸಂತೆಬೆನ್ನೂರು–ಹೋಬಳಿ ಚನ್ನಗಿರಿ–ತಾ., ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು:**

1) ಶ್ರೀ ಹೆಚ್.ಸಿ.ನಾಗರಾಜ ಬಿನ್ ಹೆಚ್.ಚನ್ನಬಸಪ್ಪ 30 ವರ್ಷ, ಟ್ರಾಕ್ಟರ್ ಟ್ರೇಲರ್ ಮಾಲೀಕರು, ನಂ.ಕೆಎ–171 ಟಿ–8760, ಕೆಎ–141–1253, ಸಂತೆಬೆನ್ನೂರು, ಚನ್ನಗಿರಿ ತಾ., ದಾವಣಗೆರೆ ಜಿಲ್ಲೆ.
2) ಡಿವಿಜನ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಅಕ್ಕಮಹಾದೇವಿ ರೋಡ್, ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ಚೌಡಮ್ಮ ಕೋಂ ಲೇಟ್ ಕೃಷ್ಣಪ್ಪ (2) ರಮೇಶ್ ಬಿನ್ ಲೇಟ್ ಕೃಷ್ಣಪ್ಪ (3) ರಂಜಿತಾ ಮಗಳು ಲೇಟ್ ಕೃಷ್ಣಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೃಷ್ಣಪ್ಪ ರವರು ಒಂದನೇ ಪ್ರತಿವಾದಿಗಳಾದ ಹೆಚ್.ಸಿ. ನಾಗರಾಜ ಇವರ ಟ್ರಾಕ್ಟರ್ ಟ್ರೇಲರ್ ನಲ್ಲಿ ಲೋಡರ್ ಮತ್ತು ಅನ್‌ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್. 1594

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ., ಕೊಡಗು ಜಿಲ್ಲೆ, ಮಡಿಕೇರಿ ರವರ ಕಛೇರಿ ನಡವಳಿಗಳು**

**ನಂ. ಇಎಕ್ಸ್‌ಇ:3:ಡಿಟಿಸಿಆರ್‌ಎಂ:162/2005–06, ದಿನಾಂಕ: 30ನೇ ಅಕ್ಟೋಬರ್ 2006**

**ಉಪಸ್ಥಿತರು:** ಹೆಚ್.ಎನ್. ಆನಂದ್
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಚಕ್ಷಣದಳ (ಇಐಬಿ), ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು** **ವಿರುದ್ಧ** **ಆರೋಪಿಗಳು**

ಅಬಕಾರಿ ಉಪ ನಿರೀಕ್ಷಕರು,
ಜಾರಿ ಮತ್ತು ತನಿಖೆ, ಮಡಿಕೇರಿ.

ತೀಯರ ಸುಜಿ ಕುಮಾರ ತಂದೆ ಮುಕುಂದ
ತೀರಿ ಮನೆ ಗ್ರಾಮ, ಚೆರುಪೂಳ ಅಂಚೆ,
ತಲಪರಂಬು ಅಂಚೆ, ಕಣ್ಣೂರು, ಕೇರಳ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 18.3.2006 ರಂದು ರಾತ್ರಿ 10.30 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು ಸಂಖ್ಯೆ-2, ಜಾರಿ ಮತ್ತು ತನಿಖೆ, ಮಡಿಕೇರಿ ಇವರು ಸಿಬ್ಬಂದಿಯೊಂದಿಗೆ ಮಡಿಕೇರಿ ತಾಲ್ಲೂಕು ಬೇತ್ರಿ ಗ್ರಾಮದಲ್ಲಿ ಕರ್ತವ್ಯದಲ್ಲಿರುವಾಗ ವಿರಾಜಪೇಟೆ ಕಡೆಯಿಂದ ಮಡಿಕೇರಿ ಕಡೆಗೆ ಒಂದು ಮಾರುತಿ ಓಮಿನಿ ಕಾರು ಬರುತ್ತಿರುವುದು ಕಂಡು ಬಂತು, ಸದರಿ ಕಾರು ನಿಲ್ಲಿಸುವಂತೆ ಸೂಚನೆ ನೀಡಲಾಗಿ ಸದರಿ ಕಾರನ್ನು ನಿಲ್ಲಿಸಿದನು, ಕಾರಿನಲ್ಲಿ ಒಬ್ಬ ಡ್ರೈವರ್ ಮಾತ್ರ ಇದ್ದು ಅವನನ್ನು ಕಾರಿನಲ್ಲಿ ಏನಿದೆ ಎಂದು ಕೇಳಾಲಾಗಿ ಗಾಭರಿಯಿಂದ ಸುಮ್ಮನಿದ್ದನು. ಸ್ಥಳದಲ್ಲಿಯೇ ಇದ್ದವರನ್ನು ಪಂಚರನ್ನಾಗಿ ಮಾಡಿಕೊಂಡು ಸಂಶಯದ ಮೇರೆಗೆ ಕಾರಿನ ಬಾಗಿಲು ತೆರೆದು ನೋಡಲಾಗಿ ಅದರ ಒಳಗಡೆ ಕಾರ್ಡ್‌ಬೋರ್ಡ್ ಪೆಟ್ಟಿಗೆಗಳು ಇರುವುದು ಕಂಡುಬಂದಿದ್ದು ಇವುಗಳನ್ನು ಹೊಂದಲು ಪರ್ಮಿಟ್ ವಗೈರೆ ಇದೆಯೇ ಎಂದು ಕೇಳಲಾಗಿ ಇಲ್ಲವೆಂದು ತಿಳಿಸಿದನು, ನಂತರ ಇವುಗಳನ್ನು ಲೆಕ್ಕಮಾಡಲಾಗಿ Old Monk XXX Rum 180 ಮೀ.ಲಿ.ಯ 3 ಪೆಟ್ಟಿಗೆಗಳಲ್ಲಿ ಒಟ್ಟು 144 ಬಾಟಲಿಗಳು ಹಾಗೂ Original Choice Whisky 180 ಮೀ.ಲಿ.ಯ 2 ಪೆಟ್ಟಿಗೆಗಳಲ್ಲಿ ಒಟ್ಟು 96 ಬಾಟಲಿಗಳಿದ್ದು ಮಾರುತಿ ಓಮಿನಿ ವಾಹನ ಸಂಖ್ಯೆ: ಕೆಎ-12-ಎಂ-6222 ಆಗಿದ್ದು, ಚಾರ್ಸಿ ಸಂಖ್ಯೆ 102820, ಇಂಜಿನ್ ಸಂಖ್ಯೆ: 11011283 ಮಾಡಲ್ 1995 ಆಗಿರುತ್ತದೆ. ಸದರಿ ಸರಕನ್ನು ಎಲ್ಲಿಗೆ ಸಾಗಿಸುತ್ತಿರುವುದಾಗಿ ಕೇಳಲಾಗಿ ಕೇರಳಕ್ಕೆಂದು ತಿಳಿಸಿದನು, ಇದನ್ನು ಎಲ್ಲಿಂದ ತಂದಿರುವುದಾಗಿ ಕೇಳಲಾಗಿ ವಿರಾಜಪೇಟೆ ಟೌನಿನ ಚಿಕ್ಕಪೇಟೆ ಎಂದು ತಿಳಿಸಿದನು ನಂತರ ಆರೋಪಿಯ ವಿಳಾಸ ಕೇಳಲಾಗಿ ತೀಯರ ಸುಜಿ ಕುಮಾರ್, ತಂದೆ ಮುಕುಂದ, ವಾಸ ತೀರೀಮನಿ ಗ್ರಾಮ, ಚೆರುಪೂಳ ಅಂಚೆ, ತಲಪರಂಬು ತಾಲ್ಲೂಕು, ಕಣ್ಣನ್ನೂರು ಜಿಲ್ಲೆ, ಕೇರಳ ರಾಜ್ಯವೆಂದು ತಿಳಿಸಿದನು. ಒಟ್ಟು 43,200 ಲೀಟರ್ ಅಕ್ರಮ ಮದ್ಯವನ್ನು ಯಾವುದೇ ರಹದಾರಿ ಇಲ್ಲದೆ ಸಾಗಾಣಿಕೆ ಮಾಡುತ್ತಿದ್ದುದು ಅಪರಾಧವಾದುದರಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ 1965ರ 11,13,14,38ಎ, 43ಎ ಕಲಂ 32, 34 ರಂತೆ ದಿನಾಂಕ: 18.3.2006 ರಂದು ಮೊಕದ್ದಮೆ ಸಂಖ್ಯೆ: 23/2005-06 ಯನ್ನು ದಾಖಲು ಮಾಡಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಲಾಗಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ ಸಂಖ್ಯೆ-2, ಮಡಿಕೇರಿ ಇವರು ತನಿಖೆಯನ್ನು ಪ್ರಾರಂಭಿಸಿ ಸದರಿ ಮದ್ಯದಿಂದ ತೆಗೆದ ಮಾದರಿಯನ್ನು ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಬೆಂಗಳೂರು ಇವರಿಗೆ ದಿನಾಂಕ: 14.7.2006 ರಿಂದು ಕಳುಹಿಸಿ ರಸಾಯನಿಕ ತಜ್ಞರ ವರದಿ ಸಂಖ್ಯೆ: ಸಿಸಿಎಲ್/2872/2006, ದಿನಾಂಕ: 14.07.2006ರ ದೃಢೀಕರಣದ ಪ್ರಕಾರ ವಶಪಡಿಸಿಕೊಂಡ 43,200 ಲೀ. ಮದ್ಯದ ಸಾಂದ್ರತೆ 39.8 ಯು.ಪಿ. ಮತ್ತು 40.7 ಯು.ಪಿ. ಇದ್ದು ಡುಪ್ಲೀಕೆಟ್ ಲಿಕ್ಕರ್ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ಡ್ಯುಪ್ಲೀಕೆಟ್ ಲಿಕ್ಕರ್ ರನ್ನು ವಶಪಡಿಸಿಕೊಂಡು ಸುಮಾರು ಅಂದಾಜು ಮೂರು ತಿಂಗಳು ಕಳೆದರು ಸಂಬಂಧಪಟ್ಟವರು ಈ ಪ್ರಾಧಿಕಾರಕ್ಕಾಗಲಿ ಅಥವಾ ಅಬಕಾರಿ ಉಪ ನಿರೀಕ್ಷಕರ ಕಛೇರಿಗಾಗಲಿ ಅರ್ಜಿ ಸಲ್ಲಿಸದೇ ಇರುವ ಕಾರಣ ವಾರಸುದಾರರಿಲ್ಲದ ಸ್ವತ್ತುಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಸಿ, ರಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬರುವುದರಿಂದ ದಿನಾಂಕ: 27.7.2006 ರಂದು ಈ ಪ್ರಾಧಿಕಾರದ ಆದೇಶದಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ.

ಸದರಿ ವಶಪಡಿಸಿಕೊಂಡ ವಾಹನದ ಮಾಲೀಕತ್ವವನ್ನು ತಿಳಿಯಲು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ-ಸಂಖ್ಯೆ 2, ಮಡಿಕೇರಿ ತಾಲ್ಲೂಕು ರವರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಪತ್ರ ಬರೆಯಲಾಗಿದ್ದು, ಅವರಿಂದ 'ಬಿ' ಎಕ್ಸ್‌ಟ್ರಾಕ್ಟ್ ನಮೂದಿಸಿರುವಂತೆ ಸದರಿ ವಾಹನದ ಮಾಲೀಕರಾದ ಶ್ರೀ ಎಂ.ಶ್ಯಾಂ ಭಟ್, ತಂದೆ ಬೀಮ ಭಟ್, ಹನುಮಾನ್ ನಿಲಯ, ಬಿ.ಎಂ. ರಸ್ತೆ, ಕುಶಾಲನಗರ ಎಂದು ತಿಳಿದು ಬಂದಿದ್ದು ಸದರಿಯವರಿಗೆ ದಿನಾಂಕ: 3.8.2006 ರಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಬಿ ರ ಪ್ರಕಾರ ಕಾರಣ ಕೇಳಿ ನೋಟೀಸನ್ನು ನೋಂದಾಯಿತ ಅಂಚೆಯ ಮೂಲಕ ರವಾನಿಸಿದ್ದು ಸದರಿ ಪತ್ರವು ವಾಹನದ ಮಾಲೀಕರಿಗೆ ತಲುಪಿದ ಬಗ್ಗೆ ಸ್ವೀಕೃತಿ ಪತ್ರವು ಸಹ ಬಂದಿರುತ್ತದೆ.

ವಾಹನವನ್ನು ಜಪ್ತುಪಡಿಸಿಕೊಂಡು ಸುಮಾರು ಏಳು ತಿಂಗಳು ಕಳೆದರು ವಶಪಡಿಸಿಕೊಂಡ ವಾಹನದ ಮಾಲೀಕರಾಗಲಿ ಸಂಬಂಧಪಟ್ಟವರಾಗಲಿ ಅಥವಾ ಅವರ ಪರ ವಕೀಲರಿಂದಾಗಲಿ ಈ ಪ್ರಾಧಿಕಾರಕ್ಕಾಗಲಿ ಅಥವಾ ಅಬಕಾರಿ ಉಪ ನಿರೀಕ್ಷಕರ ಕಛೇರಿಗಾಗಲಿ ಸೂಕ್ತ ದಾಖಲಾತಿಗಳೊಂದಿಗೆ ಯಾವುದೇ ತರಹದ ಅರ್ಜಿ ಸಲ್ಲಿಸಿರುವುದಿಲ್ಲ. ಆದುದರಿಂದ ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದೆ ವಾಹನದಲ್ಲಿ ಅಕ್ರಮ ಮದ್ಯವನ್ನು ಸಾಗಾಣಿಕೆ ಮಾಡುವ ಕೃತ್ಯದಲ್ಲಿ ಬಾಗಿಯಾಗಿರುವುದು ಮತ್ತು ತನ್ನ ಸ್ವಂತ ಲಾಭಕ್ಕಾಗಿ ಹಾಗೂ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟುಮಾಡಿ ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸಾಬೀತಾಗಿರುತ್ತದೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡಿದ್ದು ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತು ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ

ಅಬಕಾರಿ ಕಾಯಿದೆ 1965 ಕಲಂ 43ಸಿ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಅಕ್ರಮ ಮದ್ಯ ಸಾಗಾಣಿಕೆಗೆ ದಿನಾಂಕ: 18.3.2006 ರಂದು ದಾಖಲಾಗಿರುವ ಅಪರಾಧದಲ್ಲಿ ಬಳಸಿದ ವಾಹನ ಸಂಖ್ಯೆ: ಕೆಎ:12:ಎಂ:6222 ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಈ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯ ಸ್ಥಿತಿಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿಭಾಗಗಳು ತೀರಾ ತುಕ್ಕುಹಿಡಿದು ಹವಾಮಾನದ ವೈಪರೀತ್ಯಕ್ಕೆ ತೀರಾ ಹಾಳಾಗುವ ಸಂಭವ ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ವಾರಸುದಾರರಿಲ್ಲದ ಸೊತ್ತೆಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ನಿರ್ಧರಿಸಿ ಈ ಕೆಳಕಂಡ ಆದೇಶ.

**ಆದೇಶ**

ಹೆಚ್.ಎನ್. ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಂಖ್ಯೆ–2, ಮಡಿಕೇರಿ ತಾಲ್ಲೂಕು ಇವರ ಮೊಕದ್ದಮೆ ಸಂಖ್ಯೆ: 23/2005–06, ದಿನಾಂಕ: 18.3.2006 ರಂದು ವಶಪಡಿಸಿಕೊಂಡ ಮಾರುತಿ ಓಮಿನಿ ಕಾರ್ ಸಂಖ್ಯೆ: ಕೆಎ.12.ಎಂ.6222 ರನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅನ್ವಯ ವಾರಸುದಾರರಿಲ್ಲದ ಸೊತ್ತೆಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ ದಿನಾಂಕ: 30.10.2006 ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1596

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ**

**ಸಂಖ್ಯೆ: ಸನಿ 47/ನಿ.ನೇ/6/2006–07, ದಿನಾಂಕ: 27ನೇ ಅಕ್ಟೋಬರ್ 2006**

**ವಿಷಯ:** ಕಾಮಲಾಪುರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ನೆಲಮಂಗಲ ತಾಲ್ಲೂಕು ಸಂಘಕ್ಕೆ ಕಲಂ 31(1) ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕಾಮಲಾಪುರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ನೆಲಮಂಗಲ ತಾಲ್ಲೂಕು ಇವರ ಪತ್ರ ದಿನಾಂಕ: 27.10.2006.

**ಪ್ರಸ್ತಾವನೆ:**

ಕಾಮಲಾಪುರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ನೆಲಮಂಗಲ ತಾಲ್ಲೂಕು ಸಂಘದ ಕಾರ್ಯವ್ಯಾಪ್ತಿಯಲ್ಲಿದ್ದ ಹಳ್ಳಿಮರದ ಪಾಳ್ಯದಲ್ಲಿ ಹೊಸದಾಗಿ ಹಾಲು ಉತ್ಪಾದಕರ ಸಹಕಾರ ಸಂಘ ಸ್ಥಾಪನೆಯಾಗಿರುವುದರಿಂದ, ಹಳ್ಳಿಮರದ ಪಾಳ್ಯಕ್ಕೆ ಸೇರಿದವರು ಕಾಮಲಾಪುರ ಸಹಕಾರ ಸಂಘದಲ್ಲಿ ನಿರ್ದೇಶಕರಾಗಿದ್ದ ಒಟ್ಟು ನಾಲ್ಕು (4) ಜನರು ಹೊಸ ಸಂಘದ ಕಾರ್ಯವ್ಯಾಪ್ತಿಗೆ ಸೇರಿರುವುದರಿಂದ ಆಡಳಿತ ಮಂಡಳಿಯಲ್ಲಿ ಕೇವಲ 3 ಜನ ನಿರ್ದೇಶಕರಿದ್ದು ಕೋರಂ ಕೊರತೆಯಾಗಿ ಆಡಳಿತ ಮಂಡಳಿಯಲ್ಲಿ ಶೂನ್ಯ ಉಂಟಾಗಿರುತ್ತದೆ ಎಂದು ಈ ಬಗ್ಗೆ ಸೂಕ್ತ ಕ್ರಮಕ್ಕಾಗಿ ಉಲ್ಲೇಖಿತ ಪತ್ರದಡಿ ಕಾರ್ಯದರ್ಶಿಯವರು ಕೋರಿರುತ್ತಾರೆ. ಆಡಳಿತ ಮಂಡಳಿಯ ಸದಸ್ಯರ ಸಂಖ್ಯೆಯು ಸಭೆಯ ಅವಶ್ಯಕ ಸಂಖ್ಯೆ (ಕೋರಂ) ಗೆ ಅಗತ್ಯವಾದಷ್ಟು ಸಂಖ್ಯೆಯಲ್ಲಿ ಇಲ್ಲದೇ ಶೂನ್ಯವಾಗಿರುವುದರಿಂದ ಕಲಂ 31(1) ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯಕ ಎಂದು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಹಿದಾಯತ್–ಉಲ್ಲಾ–ಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ, ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ: 21.11.2001 ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಾಮಲಾಪುರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ (ನಿ) ನೆಲಮಂಗಲ ತಾಲ್ಲೂಕು ಸಂಘಕ್ಕೆ ವಿಶೇಷಾಧಿಕಾರಿಗಳನ್ನಾಗಿ 6 ತಿಂಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಸಂಬಂಧಿಸಿದ ಮಾರ್ಗ ವಿಸ್ತರಣಾಧಿಕಾರಿಗಳು ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನೆಲಮಂಗಲ ಶಿಬಿರ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ: 27ನೇ ಅಕ್ಟೋಬರ್ 2006 ರಂದು ಹೊರಡಿಸಿರುತ್ತೇನೆ.

**ಹಿದಾಯತ್-ಉಲ್ಲಾ-ಖಾನ್**

ಪಿ.ಆರ್. 1599

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪ ವಿಭಾಗ, ದೊಡ್ಡಬಳ್ಳಾಪುರ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಇ.ಐ.ಬಿ. ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಉಪಸ್ಥಿತರು:** ಬಿ.ಜಿ.ವಿಜಯೇಂದ್ರ,
ಅಭ್ಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು,
ಗುಪ್ತ ವಾರ್ತಾ ದಳ, ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು.

**ಪಿರ್ಯಾದುದಾರರು** **ವಿರುದ್ಧ** **ಪ್ರತಿವಾದಿ**

ಅಬ್ಕಾರಿ ನಿರೀಕ್ಷಕರು ನಂ.2,
ಗುಪ್ತ ವಾರ್ತಾ ದಳ, ಮೈಸೂರು.

ಶ್ರೀಮತಿ ಎಲಿಜಬತ್ ವರ್ಗೀಸ್,
**ಆರೋಪಿ**
ಜೋಸೆಫ್ ಜಾರ್ಜ್ ಇತರರು

**ಪ್ರಸ್ತಾವನೆ:**

ದಿನಾಂಕ: 16.12.2004 ರಂದು ಮಧ್ಯಾಹ್ನ 12.30 ಗಂಟೆಯಲ್ಲಿ ಅಬ್ಕಾರಿ ನಿರೀಕ್ಷಕರು ನಂ.2, ಗುಪ್ತ ವಾರ್ತಾ ವಿಭಾಗ, ಮೈಸೂರು-ಇವರು ಮೈಸೂರು ತಾಲ್ಲೂಕು, ಮೈಸೂರು-ಬೆಂಗಳೂರು ರಸ್ತೆಯ ಸಿದ್ದಲಿಂಗಪುರ ಗ್ರಾಮದ ಮುಖ್ಯ ರಸ್ತೆಯಲ್ಲಿರುವ ಶ್ರೀ ಸುಬ್ರಮಣ್ಯಸ್ವಾಮಿ ದೇವಸ್ಥಾನದ ಬಳಿ ರಸ್ತೆ ಕಾವಲು ನಡೆಸುವಾಗ ವೇಗವಾಗಿ ಬರುತ್ತಿದ್ದ ಒಂದು ಬಿಳಿ ಬಣ್ಣದ ಮಾರುತಿ ಆಲ್ಟೋ ಕಾರ್ ಸಂಖ್ಯೆ: ಕೆಎಲ್-05/ಆರ್-7088 ನ್ನು ತಡೆದು ನಿಲ್ಲಿಸಿ, ಶೋಧನೆ ನಡೆಸಲಾಗಿ, ಕಾರಿನಲ್ಲಿ ಇಬ್ಬರು ವ್ಯಕ್ತಿಗಳಿದ್ದು, ಅವರ ಹೆಸರನ್ನು ಕೇಳಲಾಗಿ, ಜೋಸೆಫ್ ಜಾರ್ಜ್ ಮತ್ತು ಉಲ್ಲಾಸ್ ಜಾರ್ಜ್, ಕೊಟ್ಟಾಯಂ ಜಿಲ್ಲೆ, ಕೇರಳ ರಾಜ್ಯ ಎಂದು ತಿಳಿಸಿದರು. ಆಸಾಮಿಗಳು ಗಾಬರಿಗೊಂಡಂತೆ ಕಂಡುಬಂದ ಕಾರಣ ಕಾರಿನ ಒಳನೋಡಿದಾಗ 10 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 35 ಲೀಟರ್‌ನಂತೆ ಒಟ್ಟು 350 ಲೀಟರ್ ಮದ್ಯಸಾರವನ್ನು ಹೊಂದಿರುವುದು ಕಂಡುಬಂದಿರುತ್ತದೆ. ಈ ಬಗ್ಗೆ ಹಾಜರಿದ್ದ ವ್ಯಕ್ತಿಗಳನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರ ಇದೆಯೇ ಎಂಬ ಬಗ್ಗೆ ವಿಚಾರಿಸಲಾಗಿ, ಯಾವುದೇ ದಾಖಲತಿಗಳನ್ನು ಹಾಜರುಪಡಿಸದ ಕಾರಣ ವಾಹನ ಮತ್ತು ಮದ್ಯಸಾರವನ್ನು ಮಹಜರ್ ಸಮಕ್ಷಮ ಇಲಾಖಾ ವಶಕ್ಕೆ ತೆಗೆದುಕೊಂಡು, ಸದರಿ ಮದ್ಯಸಾರದಿಂದ ತಲಾ 750 ಮಿಲಿಯಂತೆ 10 ಸೀಸೆಯನ್ನು ರಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಅವುಗಳಿಗೆ ಬಟ್ಟೆ ಸುತ್ತಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ, ಮಾದರಿ ಸೀಲ್ ತಯಾರಿಸಿ, ಮಾದರಿಗಳಿಗೆ ಗುರುತಿನ ಚೀಟಿಯನ್ನು ಅಂಟಿಸಿರುತ್ತಾರೆ. ವಾಹನವನ್ನು ಪರಿಶೀಲಿಸಿದಾಗ ಇದರ ನೋಂದಣಿ ಸಂಖ್ಯೆಯು ಕೆಎಲ್-05/ಆರ್-7088 ಮಾರುತಿ ಆಲ್ಟೋ ಕಾರ್ ಆಗಿದ್ದು, ಸದರಿ ವಾಹನದಲ್ಲಿ ಸಾಗಾಣಿಕೆ ಮಾಡುತ್ತಿದ್ದ ಮದ್ಯಸಾರಕ್ಕೆ ಯಾವುದೇ ಅಧಿಕೃತ ದಾಖಲಾತಿಗಳು ಇಲ್ಲದೇ ಅಕ್ರಮವಾಗಿ ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿ, ಇದು ಕರ್ನಾಟಕ ಅಬ್ಕಾರಿ ಕಾಯಿದೆ 1965ರ ಪ್ರಕರಣ ಕಲಂ 11, 13(ಎ) 15ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 33(ಬಿ), 34, 38(ಎ), ಮತ್ತು 43(ಎ) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಆರೋಪಿತರ ವಿರುದ್ಧ ಪ್ರ.ಮಾ.ವ. ಸಂಖ್ಯೆ 90/2004-05, ದಿನಾಂಕ: 16.12.2004 ರಂದು ಮೊಕದ್ದಮೆ ದಾಖಲಿಸಿ, ಆರೋಪಿ (1) ಮತ್ತು (2)ನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿ, ಪ್ರಕರಣದ ಮುಂದಿನ ತನಿಖೆಗಾಗಿ ಸಂಬಂಧಪಟ್ಟ ಸ್ವತ್ತು ಮತ್ತು ದಾಖಲೆಗಳೊಂದಿಗೆ ಮೈಸೂರು ದೇವರಾಜ ಮಾರುಕಟ್ಟೆ ವಲಯದ ಅಬ್ಕಾರಿ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತಾರೆ.

ಜಪ್ತುಗೊಳಿಸಲಾದ ಕೆಎಲ್-05/ಆರ್-7088 ನೋಂದಣಿ ಸಂಖ್ಯೆಯ ಮಾರುತಿ ಆಲ್ಟೋ ಕಾರ್ ವಾಹನದ ಮಾಲೀಕತ್ವದ ವಿವರವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಟ್ಟಾಯಂ ಜಿಲ್ಲೆ, ಕೇರಳ ರಾಜ್ಯ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 24.12.04 ರಂದು ಪತ್ರ ಬರೆಯಲಾಗಿದೆ.

ಸದರಿ ವಾಹನದ ಮಾಲೀಕರಾದ ಶ್ರೀಮತಿ ಎಲಿಜಬೆತ್ ವರ್ಗೀಸ್ ಬಿನ್ ಎಂ.ಪಿ.ವರ್ಗೀಸ್ ಮಾಡಕಂಚೆಯಿತ್ ಹಿಲ್ ವ್ಯೂ ಮಾಡಪಲ್ಲಿ, ಚಂಗನಚೇರಿ, ಕೊಟ್ಟಾಯಂ, ಕೇರಳ ರಾಜ್ಯ (ಜಿ.ಪಿ.ಎ.ಹೋಲ್ಡರ್ ಆದ ರೋಷನ್ ಜಾಕೋಬ್) ಇವರು ತಮ್ಮ ವಕೀಲರ ಮುಖಾಂತರ ದಿನಾಂಕ: 30.12.2004 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತುಮಾಡಿದ ವಾಹನವು ತನ್ನದೆಂದು, ಈ ವಾಹನದ ಮೇಲೆ ಹೆಚ್‌ಡಿಎಫ್‌ಸಿ ಬ್ಯಾಂಕಿನಲ್ಲಿ ಅಡಮಾನವಿರುತ್ತದೆ. ತಾನು ಇತ್ತೀಚೆಗೆ ಹೆಣ್ಣು ಮಗುವೊಂದಕ್ಕೆ ಜನ್ಮ ವಿತ್ತ ಕಾರಣ ಆಸ್ಪತ್ರೆಯಲ್ಲಿ ಶುಶ್ರೂಷೆ ಪಡೆಯಲು ಮತ್ತು ಸ್ವಂತ ಅನುಕೂಲಕ್ಕಾಗಿ ತನ್ನ ತಂದೆಯವರು ವಾಹನವನ್ನು ನೀಡಿರುತ್ತಾರೆ. ಹಾಗೆಯೇ ತನ್ನ ಪತಿಯವರು ಸಹ ಹಾಲಿ ಬೆಂಗಳೂರಿನಲ್ಲಿರುವ ವರ್ಲ್ಡ್ ರೋಂ ಇಂಡಿಯಾ ಪ್ರೈವೇಟ್ ಲಿ., ಸಂಸ್ಥೆಯಲ್ಲಿ ಸೇವಾ ಇಂಜಿನಿಯರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಈ ಮಧ್ಯೆ ವಾಹನದ ಚಾಲಕನಾಗಿ ತನ್ನ ತಂದೆಯ ದೂರ ಸಂಬಂಧಿಯಲ್ಲಿ ಒಬ್ಬರಾದ ಕೆ.ಜಿ.ಮ್ಯಾತಿವ್, ಕುಂಜಿ ಮನಿಲ್ ಮಲಪಲ್ಲಿ ಕೇರಳ ರಾಜ್ಯ ಇವರನ್ನು ಚಾಲಕನಾಗಿ ನೇಮಿಸಿಕೊಂಡಿದ್ದು, ಈತನು ತಮ್ಮ ಸಂಬಂಧಿಯೊಬ್ಬರು ಆಸ್ಪತ್ರೆಯಲ್ಲಿದ್ದು ಅವರಿಗೆ ಸೂಕ್ತ ಚಿಕಿತ್ಸೆ ಕೊಡಿಸುವ ಸಲುವಾಗಿ ವಹನವನ್ನು ತೆಗೆದುಕೊಂಡು ಹೋಗಿ ದಿನಾಂಕ: 16.12.2004 ರಂದು ಅಕ್ರಮವಾಗಿ ಮದ್ಯಸಾರವನ್ನು ಹೊಂದಿ ಸಾಗಾಣಿಕೆಯಲ್ಲಿ ಬಳಸಿರುವುದಾಗಿ ತಿಳಿದು ಬಂದಿರುತ್ತದೆ. ವಸ್ತುಸ್ಥಿತಿಯಲ್ಲಿ ತಾನು ಅನಾರೋಗ್ಯ ಪಿಡಿತಳಾಗಿದ್ದು, ಒಂದು ಹೆಣ್ಣು ಮಗುವಿನ ಬಾಣಂತಿಯಾಗಿರುತ್ತೇನೆ. ತನ್ನ ಮತ್ತು ಮಗುವಿನ ಶುಶ್ರೂಷೆ

ಅನಿವಾರ್ಯವಾಗಿದ್ದು, ವಾಹನ ಅವಶ್ಯಕತೆ ಇರುತ್ತದೆ ಹಾಗೂ ಈ ಕೃತ್ಯದಲ್ಲಿ ನಿರ್ದೋಷಿಯಾಗಿದ್ದು, ತನ್ನ ಪಾತ್ರ ಏನು ಇರುವುದಿಲ್ಲವೆಂದು ತಿಳಿಸುತ್ತಾ, ವಾಹನ ಮಾಲೀಕಳಾದ ತನ್ನ ಗಮನಕ್ಕೆ ಬರದೆ ಚಾಲಕನು ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿಕೆ ಮಾಡಿರುವುದು ತನಗೆ ತಿಳಿದಿರುವುದಿಲ್ಲ. ಆದ ಕಾರಣ ವಾಹನವು ಉಪಯೋಗವಿಲ್ಲದೇ ಒಂದೇ ಕಡೆ ನಿಲ್ಲುಗಾಡೆಯ ಸ್ಥಿತಿಯಲ್ಲಿ ಇರುವುದರಿಂದ ಮಳೆ, ಗಾಳಿ, ಮತ್ತು ಬಿಸಿಲಿನ ವಾತಾವರಣದ ವೈಪರೀತ್ಯಕ್ಕೆ ಸಿಲುಕಿ ಬಿಡಿಭಾಗಗಳು ಹಾಳಾಗಿ ಅದರ ಮೌಲ್ಯವನ್ನು ಕಳೆದುಕೊಳ್ಳುವ ಸಾಧ್ಯತೆ ಇರುವುದರಿಂದ ಪ್ರಾಧಿಕಾರವು ವಿಧಿಸುವ ಎಲ್ಲಾ ಷರತ್ತುಗಳನ್ನು ಪೂರೈಸುವುದಾಗಿ/ಬದ್ಧನಾಗಿರುವುದಾಗಿ ಒಪ್ಪಿ, ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆಮಾಡಿ ಕೊಡಬೇಕೆಂದು ಕೋರಿರುತ್ತಾರೆ.

ಪ್ರಕರಣ ತನಿಖೆ ಮುಂದುವರಿಸಿದ ಅಬ್ಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮೈಸೂರು ಉತ್ತರ ತಾಲ್ಲೂಕು ಇವರು ಮದ್ಯಸಾರದ ಮಾದರಿಗಳನ್ನು ರಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ, ದಿನಾಂಕ: 21.12.2004 ರಂದು ವರದಿಯನ್ನು ಪಡೆದಿದ್ದು, ಆಲ್ಕೋಹಾಲ್ ಅಂಶ ಪತ್ತೆಯಾಗಿರುವುದಾಗಿ ರಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತಾರೆ.

ವಾಹನ ಮಧ್ಯಂತರ ಬಿಡುಗಡೆ ಸಂಬಂಧ ಅರ್ಜಿದಾರರ ಪರ ನ್ಯಾಯಾವಾದಿಗಳು ಸಲ್ಲಿಸಿರುವ ಅರ್ಜಿಯ ಕುರಿತು ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ಸಹಾಯಕ ಅಭಿಯೋಗ ನಿರ್ದೇಶಕರು ಮೈಸೂರು ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ 04.01.2005 ರಂದು ಪತ್ರ ಬರೆಯಲಾಗಿದೆ.

ಜಂಟಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಂಗನಚೇರಿ, ಕೊಟ್ಟಾಯಂ ಜಿಲ್ಲೆ, ಕೇರಳ ರಾಜ್ಯ ಇವರು ವಾಹನದ 'ಬಿ' ಎಕ್ಸ್‌ಟ್ರಾಕ್ಟ್‌ನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಇದನ್ನು ಪರಿಶೀಲಿಸಲಾಯಿತು. ಕೆಎಲ್-05/ಆರ್-7088 ನೋಂದಣಿ ಸಂಖ್ಯೆಯ ಮಾರುತಿ ಆಲ್ಟೋ ಕಾರ್ ಎಂದು ನಮೂದಾಗಿರುತ್ತದೆ. ಇದನ್ನು ದಿನಾಂಕ: 09.09.2004 ರಂದು ಖರೀದಿಸಲಾಗಿದ್ದು, 02.09.2004 ರಂದು ಜಂಟಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚೆಂಗನಚೇರಿಯಲ್ಲಿ ಶ್ರೀಮತಿ ಎಲಿಜಬೆತ್ ಇವರ ಹೆಸರಿಗೆ ನೋಂದಣಿಯಾಗಿರುತ್ತದೆ. ಆಗಸ್ಟ್-2004ರ ಮಾದರಿಯಾಗಿದ್ದು, ಚಾರ್ಸಿ ಸಂಖ್ಯೆ: ಎಂಎ-3 ಇವೈಡಿ 81500 3982243, ಇಂಜಿನ್ ಸಂಖ್ಯೆ ಎಫ್8ಡಿಎನ್-3111512 ಮತ್ತು ಸದರಿ ವಾಹನವು ಹೆಚ್.ಡಿಎಫ್‌ಸಿ ಬ್ಯಾಂಕ್ ತಿರುವಳ್ಳ ಶಾಖೆಯಲ್ಲಿ ಅಡಮಾನ ಮಾಡಲಾಗಿದೆ.

ಫ್ಲೇವರ್ಸ್ ಅಂಡ್ ಎಸೆನ್ಸ್ ಪ್ರೈ.ಲಿ., ಮೈಸೂರು ಇವರಿಗೆ ರಹದಾರಿ ಸಂಖ್ಯೆ: 1875/383500/2004-05, ದಿನಾಂಕ: 20.01.2005 ರಲ್ಲಿ 1255 ಲೀಟರ್ ಮದ್ಯಸಾರವನ್ನು ಹಂಚಿಕೆ ಮಾಡಲಾಗಿರುತ್ತದೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ 350 ಲೀಟರ್ ಮದ್ಯಸಾರವು ಇದರಲ್ಲಿ ಒಳಗೊಂಡಿರುತ್ತದೆ.

ಈ ಪ್ರಕರಣದಲ್ಲಿ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿದ್ದು, ಜಪ್ತುಗೊಳಿಸಲಾದ ವಾಹನ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬ್ಕಾರಿ ಕಾಯಿದೆ 1965ರ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಶ್ರೀಮತಿ ಎಲಿಜಬೆತ್ ವರ್ಗೀಸ್ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 16.02.2005 ರಂದು ಜಾರಿಗೊಳಿಸಲಾಗಿದೆ.

ಈ ಪ್ರಾಧಿಕಾರವು ತನ್ನ ಆದೇಶದ ದಿನಾಂಕ: 26.02.2005 ರಲ್ಲಿ ಅರ್ಜಿದಾರರು ಮಾರುತಿ ಆಲ್ಟೋ ಕಾರ್ ಕೆಎಲ್-05/ಆರ್-7088 ನೋಂದಣಿ ಸಂಖ್ಯೆಯ ವಾಹನವನ್ನು ಮಧ್ಯಂತರ ಬಿಡುಗಡೆಯಾಗಿ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಿ, ವಾಹನದ ಭದ್ರತೆಗಾಗಿ ರೂ. 2,56,000/- ಗಳ ಬ್ಯಾಂಕ್ ಗ್ಯಾರೆಂಟಿಯನ್ನು ಪಡೆದು, ಕೆಲವು ಷರತ್ತುಗಳನ್ವಯ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ಅದರ ಆರ್.ಸಿ. ಮಾಲೀಕರ ತಾತ್ಕಾಲಿಕ ಸುಪರ್ದಿಗೆ ಬಿಡುಗಡೆ ಗೊಳಿಸಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು, ಪರಿಶೀಲನಾಂಶಗಳು ಈ ಕೆಳಕಂಡಂತೆ ಇರುತ್ತವೆ.

(1) 16.12.2004 ರಂದು ಮಾರುತಿ ಆಲ್ಟೋ ಕಾರ್ ಕೆಎಲ್-05/ಆರ್-7088 ನೋಂದಣಿ ಸಂಖ್ಯೆಯ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡಲಾಗಿತ್ತೇ?

(2) ವಶಪಡಿಸಿಕೊಂಡಿರುವ ವಾಹನ ಮಾಲೀಕರು ನಾನೆಂದೂ, ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯಸಾರ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?

(3) ಜಪ್ತುಗೊಳಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ ಎರಡನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಿದೆ.

**ಪ್ರಶ್ನೆ: (1)**

ದಿನಾಂಕ: 16.12.2004 ರಂದು, ಅಬ್ಕಾರಿ ನಿರೀಕ್ಷಕರು ನಂ.2, ಗುಪ್ತ ವಾರ್ತಾ ದಳ, ಮೈಸೂರು ಇವರು, ಮೈಸೂರು ತಾಲ್ಲೂಕು, ಮೈಸೂರು-ಬೆಂಗಳೂರು ಮುಖ್ಯ ರಸ್ತೆಯ ಶ್ರೀ ಸುಬ್ರಮಣ್ಯಸ್ವಾಮಿ ದೇವಸ್ಥಾನದ ಬಳಿ ವಾಹನವನ್ನು ತಪಾಸಣೆಗೆ ಒಳಪಡಿಸಿದಾಗ ಹಾಜರಿದ್ದ ವ್ಯಕ್ತಿಗಳು ಯಾವುದೇ ಅಧಿಕೃತ ದಾಖಲಾತಿಗಳನ್ನು ಹಾಜರುಪಡಿಸದ ಕಾರಣ ಆರೋಪಿತರು, ವಾಹನ ಮತ್ತು ಮದ್ಯಸಾರವನ್ನು ಸ್ಥಳ ಮಹಜರ್ ಕ್ರಮ ಜರುಗಿಸಿ, ಜಪ್ತುಗೊಳಿಸಿ ಪ್ರ.ಮಾ.ವರದಿ ಸಂಖ್ಯೆ: 90/2004-05, ದಿನಾಂಕ; 16.12.2004 ರಲ್ಲಿ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿ ಮತ್ತು ಅಬ್ಕಾರಿ ವಸ್ತುಗಳನ್ನು ಮುಂದಿನ ತನಿಖೆಗಾಗಿ ಮೈಸೂರು ದೇವರಾಜ ಮಾರುಕಟ್ಟೆ ವಲಯದ ಅಬ್ಕಾರಿ ಉಪ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತಾರೆ. ಸದರಿ ಅಧಿಕಾರಿಗಳು ತನಿಖೆಯನ್ನು ಮುಂದುವರೆಸಿ, ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ರಸಾಯನಿಕ ಪರೀಕ್ಷೆಗೆ

ಒಳಪಡಿಸಿ, ವರದಿ ಪಡೆಯಲಾಗಿ, ಆಲ್ಕೋಹಾಲ್ ಅಂಶ ಪತ್ತೆಯಾಗಿರುವುದು ರಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಇದನ್ನು ಗಮನಿಸಿದರೆ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ದಾಖಲಾತಿಗಳಿಂದ ಸ್ಪಷ್ಟವಾಗಿ ಕಂಡು ಬಂದಿರುತ್ತದೆ.

**ಪ್ರಶ್ನೆ: (2)**

ವಶಪಡಿಸಿಕೊಂಡ ವಾಹನ ಮಾಲೀಕರು ಎಂಬುದಕ್ಕೆ ತಾತ್ಕಾಲಿಕ ಬಿಡುಗಡೆ ಸಂಬಂಧ ಹಾಜರುಪಡಿಸಲಾದ ಆರ್.ಸಿ.ಪುಸ್ತಕ ನಕಲು ಮತ್ತು ಜಂಟಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಂಗನಚೇರಿ ಇವರು ಕಳುಹಿಸಿರುವ 'ಬಿ' ವಹಿಯೊಂದಿಗೆ ಪರಿಶೀಲಿಸಲಾಗಿ, ಒಂದಕ್ಕೊಂದು ತಾಳೆಯಾಗಿರುತ್ತದೆ. ಶ್ರೀಮತಿ ಎಲಿಜಬೆತ್ ವರ್ಗೀಸ್ ಇವರು ವಾಹನ ಮಾಲೀಕರಾಗಿರುವುದು ದಾಖಲಾತಿಗಳಿಂದ ದೃಢಪಟ್ಟಿರುತ್ತದೆ.

ಸದರಿ ವಾಹನವನ್ನು ದಿನಾಂಕ: 02.09.2004 ರಂದು ಖರೀದಿಸಿದ್ದು, ದಿನಾಂಕ: 09.09.2004 ರಂದು ಜಂಟಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಂಗನಚೇರಿ ಕಛೇರಿಯಲ್ಲಿ ನೋಂದಣಿಯಾಗಿರುತ್ತದೆ. ಕೇರಳ ರಾಜ್ಯದ ತಿರುವಲ್ಲ ಮುನ್ಸಿಪಾಲಿಟಿ ಜನನ ಮತ್ತು ಮರಣ ನೋಂದಣಿ ಪ್ರಾಧಿಕಾರವು ನೀಡಿರುವ ಜನನ ಪ್ರಮಾಣ ಪತ್ರವನ್ನು ವಾಹನ ಮಾಲೀಕರು ಹಾಜರುಪಡಿಸಿರುತ್ತಾರೆ. ಅದರಂತೆ ದಿನಾಂಕ: 10.09.2004 ರಂದು ಜೆ.ಎಂ.ಎಂ. ಆಸ್ಪತ್ರೆಯಲ್ಲಿ ಹೆಣ್ಣು ಮಗುವೊಂದಕ್ಕೆ ಜನ್ಮ ನೀಡಿರುವುದು ಸ್ಪಷ್ಟವಾಗಿರುತ್ತದೆ. ಅಲ್ಲದೆ ತಿರುವಲ್ಲ ಮೆಡಿಕಲ್ ಮಿಷನಲ್ಲಿ ದಿನಾಂಕ: 13.12.2004 ರಿಂದ 19.12.2004ರ ವರೆಗೆ ಶುಶ್ರೂಷೆ ಪಡೆದ ಬಗ್ಗೆ ವರದಿ ನೀಡಿರುತ್ತಾರೆ. ಈ ಸಂದರ್ಭದಲ್ಲಿ ಮಾಲೀಕರ ತಂದೆಯವರು ತಾಯಿ ಮತ್ತು ಮಗುವಿನ ಶುಶ್ರೂಷೆಗಾಗಿ ಆಸ್ಪತ್ರೆಗೆ ಹೋಗಿ ಬರಲು ವಾಹನವನ್ನು ನೀಡಿರುವುದಾಗಿ ತಿಳಿಸಿರುತ್ತಾರೆ. ತನ್ನ ಪತಿಯವರು ಬೆಂಗಳೂರಿನಲ್ಲಿರುವ ವರ್ಲ್ಡ್ ರೋಂ ಇಂಡಿಯಾ ಪ್ರೈವೇಟ್ ಲಿ., ಸಂಸ್ಥೆಯಲ್ಲಿ ಇಂಜಿನಿಯರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ. ತಾನು ಸಹ ಬಾಣಂತಿಯಾಗಿದ್ದು, ಸ್ವಂತ ಕೆಲಸ ನಿಮಿತ್ತ ಓಡಾಡಲು ವಾಹನ ಚಾಲಕನ ಅವಶ್ಯಕತೆ ಇದ್ದುದರಿಂದ ತಮ್ಮ ತಂದೆಯವರ ದೂರದ ಸಂಬಂಧಿಯನ್ನು ಚಾಲಕನಾಗಿ ನೇಮಿಸಿಕೊಳ್ಳಲಾಗಿತ್ತು. ಈತನ ಸಂಬಂಧಿಯೊಬ್ಬರು ಆಸ್ಪತ್ರೆಯಲ್ಲಿದ್ದು ಅವರ ಚಿಕಿತ್ಸೆ ಕೊಡಿಸುವ ಸಲುವಾಗಿ ವಾಹನವನ್ನು ತೆಗೆದುಕೊಂಡು ಹೋಗಿ ದುರುಪಯೋಗಪಡಿಸಿಕೊಂಡಿರುತ್ತಾನೆ. ಅಬ್ಕಾರಿ ಇಲಾಖೆಗೆ ಸಂಬಂಧಿಸಿದ ಯಾವುದೇ ವಸ್ತುಗಳನ್ನು ಅಕ್ರಮವಾಗಿ ಸಾಗಿಸಿದ ವಿಷಯ ತನಗೆ ಪರೋಕ್ಷವಾಗಲೀ ಅಥವಾ ಸ್ವಂತವಾಗಲೀ ತನಗೆ ತಿಳಿದಿಲ್ಲವೆಂದು, ಈ ಪ್ರಕರಣದಲ್ಲಿ ತಾನು ಯಾವುದೇ ಅಪರಾಧ ಮಾಡಿರುವುದಿಲ್ಲವಾದ್ದರಿಂದ ವಾಹನವನ್ನು ತನಗೆ ಬಿಟ್ಟುಕೊಡಬೇಕೆಂದು ಕೋರಿರುತ್ತಾರೆ.

ವಾಹನದ ಮಾಲೀಕರು ಕೇರಳ ರಾಜ್ಯದ ನಿವಾಸಿಯಾಗಿರುತ್ತಾರೆ. ಮತ್ತು ಇವರ ಪತಿಯು ಸಹ ಬೆಂಗಳೂರಿನ ಒಂದು ಸಂಸ್ಥೆಯಲ್ಲಿ ಇಂಜಿನಿಯರಾಗಿ ಕೆಲಸ ನಿರ್ವಹಿಸುತ್ತಿದ್ದು ಅರ್ಜಿದಾರರು ಗರ್ಭಿಣಿಯಾದ ಕಾರಣ ಆಕೆಯ ಆಸ್ಪತ್ರೆ ಮತ್ತು ಸ್ವಂತ ಉಪಯೋಗಕ್ಕಾಗಿ ಅವರ ತಂದೆಯವರು ಮಾರುತಿ ಆಲ್ಟೋ ಕಾರನ್ನು ನೀಡಿರುವುದು ಸ್ಪಷ್ಟವಾಗಿರುತ್ತದೆ. ಅದರ ಚಾಲನೆಗಾಗಿ ನೇಮಕ ಮಾಡಿಕೊಂಡ ವಾಹನ ಚಾಲಕನು ವಾಹನವನ್ನು ಸದುದ್ದೇಶಕ್ಕೆ ಉಪಯೋಗಿಸಿಕೊಳ್ಳದೆ ಬೇರೆಯವರಿಗೆ ನೀಡಿ, ಸದರಿ ಅಕ್ರಮ ಸಾಗಾಣಿಕೆ ಕ್ರಿಯೆಯನ್ನು ಚಾಲಕ ಹಾಗೂ ಇನ್ನಿತರರು ಸಂಚು ಹೂಡಿ ಮಾಲೀಕರು ಉದ್ದೇಶಿತ ವ್ಯವಹಾರಕ್ಕೆ ಲಭ್ಯವಿದ್ದ ವಾಹನವನ್ನು ದುರುಪಯೋಗ ಮಾಡಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯನ್ನು ಆರ್.ಸಿ. ಮಾಲೀಕರ ತಿಳುವಳಿಕೆಗೆ ಬಾರದೇ ಮಾಡಿರುವ ಕೃತ್ಯ ಎಂದು ಈ ಪ್ರಾಧಿಕಾರವು ನಂಬಬಹುದಾಗಿರುತ್ತದೆ. ಈ ವಿಷಯ ವಾಹನ ಮಾಲೀಕರ ತಿಳುವಳಿಕೆಗೆ ಬಾರದೇ ನಡೆದಿರುತ್ತದೆ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ. ವಾಹನ ಮಾಲೀಕರು ಬಾಣಂತಿಯಾಗಿದ್ದು, ಅಪರಾಧ ಸ್ಥಳದಿಂದ ಸುಮಾರು 810 ಕಿ.ಮೀಟರ್ ದೂರದ ನಗರದಲ್ಲಿ ನೆಲೆಸಿದ್ದು, ವಾಹನವನ್ನು ಚಾಲಕನ ವೈಯಕ್ತಿಕ ವ್ಯವಹಾರಕ್ಕೆ ನೀಡಿರುವುದು ತಿಳಿದುಬಂದಿರುತ್ತದೆ. ವಾಹನ ಮಾಲೀಕಳ ತಿಳುವಳಿಕೆಯಿಂದಲೇ ಈ ಕೃತ್ಯವು ನಡೆದಿದೆ ಎಂದು ಹೇಳಲು ಯಾವುದೇ ನಿರ್ದಿಷ್ಟವಾದ ಸಾಕ್ಷ್ಯಾಧಾರಗಳು ಇರುವುದಿಲ್ಲ. ಅಲ್ಲದೆ ಮಾಲೀಕಳ ಬಳಿ ವಾಹನ ಚಾಲನಾ ಲೈಸೆನ್ಸ್ ಇದೆಯೇ ಎಂದು ಪರಿಶೀಲಿಸಲಾಗಿ, ಇಲ್ಲದಿರುವುದು ಕಂಡುಬಂದಿದೆ. ಮಾಲೀಕಳು ಮಹಿಳೆಯಾಗಿದ್ದು ವಾಹನವನ್ನು ಚಾಲಕನ ಸ್ವಂತ ಕೆಲಸದ ನಿಮಿತ್ತ ನೀಡಿದ್ದು, ತದನಂತರ ಸದರಿ ಚಾಲಕನು ಸಂಚು ಹೂಡಿ ಆರ್.ಸಿ.ಮಾಲೀಕರ ಗಮನ ತಪ್ಪಿಸಿ, ವಾಹನದಲ್ಲಿ ಮಾದಕ ದ್ರವ್ಯಗಳ ಸಾಗಾಣಿಕೆಯಲ್ಲಿ ಬಳಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಈ ಪ್ರಾಧಿಕಾರವು ಮೂರನೇ ವಿವಾದಾಂಶವನ್ನು ನಕರಾತ್ಮಕವಾಗಿ ಪರಿಗಣಿಸಿ, ಹಾಗೂ ಈ ಕೆಳಕಂಡ ಆದೇಶವನ್ನು ಹೊರಡಿಸಲು ತೀರ್ಮಾನಿಸಲಾಗಿದೆ.

**ಸಂಖ್ಯೆ: ಡಿಟಿಸಿಆರ್/202/2004-05, ದಿನಾಂಕ: 6ನೇ ನವೆಂಬರ್ 2006**

ಬಿ.ಜಿ.ವಿಜಯೇಂದ್ರ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಗುಪ್ತ ವಾರ್ತಾ ದಳ, ಮೈಸೂರು-ಚಾಮರಾಜನಗರಜಿಲ್ಲೆ, ಮೈಸೂರು ಆದ ನಾನು ಕರ್ನಾಟಕ ಅಬ್ಕಾರಿ ಕಾಯಿದೆ 1965 ಕಲಂ 43(ಎ)ರ ಅಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಈ ಪ್ರಕರಣದಲ್ಲಿ ಜಪ್ತು ಪಡಿಸಲಾದ ಮಾರುತಿ ಆಲ್ಟೋ ಕಾರ್ ಕೆಎಲ್-05/ಆರ್-7088 ನೋಂದಣಿ ಸಂಖ್ಯೆಯ ವಾಹನವನ್ನು ದಿನಾಂಕ: 26.02.2005 ರನ್ವಯ ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಿರುವ ಆದೇಶವನ್ನು ಖಾಯಂಗೊಳಿಸಿ, ವಾಹನವನ್ನು ಆರ್.ಸಿ.ಮಾಲೀಕರಾದ ಶ್ರೀಮತಿ ಎಲಿಜಬೆತ್ ವರ್ಗೀಸ್ ಬಿನ್ ಎಂ.ಪಿ.ವರ್ಗೀಸ್ ಮಂಡಕಂಜಿ ಯಿತ್ ಹಿಲ್ ವ್ಯೂ, ಮಾಡಪಲ್ಲಿ, ಚಂಗನಚೇರಿ, ಕೊಟ್ಟಾಯಂ ಜಿಲ್ಲೆ, ಕೇರಳ ರಾಜ್ಯ ಇವರ ವಶಕ್ಕೆ ಶಾಶ್ವತವಾಗಿ ಬಿಡುಗಡೆ ಮಾಡಿ, ಆದೇಶಿಸಲಾಗಿದೆ. ಸದರಿ ವಾಹನ ತಾತ್ಕಾಲಿಕ ಬಿಡುಗಡೆ ಸಂಬಂಧ ಈ ಪ್ರಾಧಿಕಾರಕ್ಕೆ ನೀಡಿರುವ ರೂ.2,56,000/- ಗಳ ಬ್ಯಾಂಕ್ ಗ್ಯಾರಂಟಿಯನ್ನು ಹಿಂದಿರುಗಿಸಲು ಆದೇಶಿಸಲಾಗಿದೆ. ಹಾಗೂ ಪ್ರಕರಣದಲ್ಲಿ ಆರೋಪಿತರ ವಿರುದ್ಧ ಸಂಬಂಧಪಟ್ಟ ನ್ಯಾಯಾಲಯದಲ್ಲಿ ಅಂತಿಮ ಆರೋಪಪಟ್ಟಿ ಈ ಆದೇಶವು ಅಡ್ಡಿಯಗುವುದಿಲ್ಲ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 06.11.2006 ರಂದು ಲಿಪಿಕ ಸಿಬ್ಬಂದಿಗೆ ಉತ್ತಲೇಖನ ನೀಡಿ, ಗಣಕ ಯಂತ್ರದಲ್ಲಿ ಮುದ್ರಿಸಿ, ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಬಿ.ಜಿ. ವಿಜಯೇಂದ್ರ**

ಪಿ.ಆರ್. 1598

ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು,
ಇ.ಐ.ಬಿ., ಮೈಸೂರು–ಚಾಮರಾಜನಗರ ಜಿಲ್ಲೆ, ಮೈಸೂರು.

## ನೋಂದಣಿ ಪ್ರಾಧಿಕರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು–22, ಇವರ ಕಛೇರಿ ನಡಾವಳಿ

**ಉಪಸ್ಥಿತರು:** ಶ್ರೀ ಕೆ.ಟಿ. ಹಾಲಸ್ವಾಮಿ,
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ ಕೆಎ-04-1936 (ಪಿ.ಎಸ್..ವಿ.) ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಮಾಲೀಕರ ಅರ್ಜಿ ದಿನಾಂಕ: 18.07.2006
2) ಮೋ.ವಾ.ನಿ. ರವರ ವರದಿ ದಿನಾಂಕ: 26.08.2006.

**ಪ್ರಸ್ತಾವನೆ:**

ವಾಹನ ಸಂಖ್ಯೆ: ಕೆಎ–04–1936 ಮಾಲೀಕರಾದ ಶ್ರೀ ಬಿ.ರಹಮತ್ತುಲ್ಲಾ ಖಾನ್, ಬಿನ್ ಲೇಟ್ ಬಿ.ಪಿ.ಬಶೀರ್ ಖಾನ್, ನ್ಯಾಷನಲ್ ಟ್ರಾವೆಲ್ಸ್ ಆಫೀಸ್, ಹೆಚ್.ಎಂ.ಟಿ. ಟೌನ್‌ಶಿಪ್, ಜಾಲಹಳ್ಳಿ, ಬೆಂಗಳೂರು, ರವರು ದಿನಾಂಕ: 18.07.2006 ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ, ವಾಹನದ ದುರಸ್ತಿ ಲಾಭದಾಯಕವಲ್ಲದ ಕಾರಣ ನೋಂದಣಿಯನ್ನು ರದ್ದುಪಡಿಸಲು ಅನುಮತಿ ಕೋರಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ: 26.08.2006 ರಂದು ವರದಿ ಸಲ್ಲಿಸಿದ್ದು, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ದುಪಡಿಸಬಹುದು ಎಂದು ಶಿಫಾರಸ್ಸು ಮಾಡಿರುತ್ತಾರೆ. ಸದರಿ ವಾಹನದ ತೆರಿಗೆಯನ್ನು 30.06.2006 ವರೆಗೆ ಪಾವತಿಸಲಾಗಿದೆ. ವಾಹನವು ದಿನಾಂಕ: 30.06.2006 ರಿಂದ ಅಧ್ಯರ್ಪಣದಲ್ಲಿರುತ್ತದೆ. ಈ ಮೇಲ್ಕಂಡ ಕಾರಣಗಳಿಂದ ಮೋಟಾರು ವಾಹನ ಸಂಖ್ಯೆ: ಕೆಎ–04–1936 ರ ನೋಂದಣಿಯನ್ನು ರದ್ದುಮಾಡಿ ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ: ಪ್ರಾ.ಸಾ.ಅ./ಬೆಂ(ಉ)/ಕೆಎ–04–1936/06–07, ದಿನಾಂಕ: 12ನೇ ಸೆಪ್ಟೆಂಬರ್ 2006**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ವಿಧಿ 55 (1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ.ಟಿ. ಹಾಲಸ್ವಾಮಿ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಕಾರಣಗಳಿಂದಾಗಿ, ಮೋಟಾರು ವಾಹನ ಸಂಖ್ಯೆ: ಕೆಎ–04–1936 (ಪಿ.ಎಸ್.ವಿ.) ರ ಮೇಲೆ ಏನಾದರೂ ತೆರಿಗೆ, ಆಡಿಟ್ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಮಾಡಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1 | ಮೋಟಾರು ವಾಹನ ಸಂಖ್ಯೆ | KA-04-1936 |
| 2 | ವಾಹನದ ತಯಾರಕನ ಹೆಸರು | Ashok Layland Ltd., |
| 3 | ವಾಹನದ ಮಾದರಿ | PSV-Saloon |
| 4 | ವಾಹನ ತಯಾರಿಕ ವರ್ಷ | 1985 |
| 5 | ಸಿಲಿಂಡರ್ ಸಂಖ್ಯೆ | 6 |
| 6 | ಚಾಸಿಸ್ ಸಂಖ್ಯೆ | ALEL-174221 |
| 7 | ಇಂಜಿನ್ ಸಂಖ್ಯೆ | ALEG-26543 |
| 8 | ಅಶ್ವಶಕ್ತಿ | 31.7 HP |
| 9 | ಆಸನ ಸಾಮರ್ಥ್ಯ | 50+1=51 in all |
| 10 | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಬಿ.ರಹಮತ್ತುಲ್ಲಾ ಖಾನ್, ಬಿನ್ ಲೇಟ್ ಬಿ.ಪಿ.ಬಶೀರ್ ಖಾನ್, ನ್ಯಾಷನಲ್ ಟ್ರಾವೆಲ್ಸ್ ಆಫೀಸ್, ಹೆಚ್.ಎಂ.ಟಿ. ಟೌನ್‌ಶಿಪ್, ಜಾಲಹಳ್ಳಿ, ಬೆಂಗಳೂರು. |

ಪಿ.ಆರ್. 1608

**ಕೆ.ಟಿ. ಹಾಲಸ್ವಾಮಿ**

ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ).

## ನೋಂದಣಿ ಪ್ರಾಧಿಕರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು–22, ಇವರ ಕಛೇರಿ ನಡಾವಳಿ

**ಉಪಸ್ಥಿತರು:** ಶ್ರೀ ಕೆ.ಟಿ. ಹಾಲಸ್ವಾಮಿ,
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ ಕೆಎ–05–4781 (ಪಿ.ಎಸ್..ವಿ.) ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಮಾಲೀಕರ ಅರ್ಜಿ ದಿನಾಂಕ: 23.08.2006
2) ಮೋ.ವಾ.ನಿ. ರವರ ವರದಿ ದಿನಾಂಕ: 28.08.2006.

**ಪ್ರಸ್ತಾವನೆ:**

ವಾಹನ ಸಂಖ್ಯೆ: ಕೆಎ–05–4781 ಮಾಲೀಕರಾದ ಶ್ರೀ ಬಿ.ರಹಮತ್ತುಲ್ಲಾ ಖಾನ್, ಬಿನ್ ಲೇಟ್ ಬಿ.ಪಿ.ಬಶೀರ್ ಖಾನ್, ನ್ಯಾಷನಲ್ ಟ್ರಾವೆಲ್ಸ್ ಆಫೀಸ್, ಹೆಚ್.ಎಂ.ಟಿ. ಟೌನ್‌ಶಿಪ್, ಜಾಲಹಳ್ಳಿ, ಬೆಂಗಳೂರು, ರವರು ದಿನಾಂಕ: 23.08.2006 ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ, ವಾಹನದ ದುರಸ್ತಿ ಲಾಭದಾಯಕವಲ್ಲದ ಕಾರಣ ನೋಂದಣಿಯನ್ನು ರದ್ದುಪಡಿಸಲು ಅನುಮತಿ ಕೋರಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ: 28.08.2006 ರಂದು ವರದಿ ಸಲ್ಲಿಸಿದ್ದು, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ದುಪಡಿಸಬಹುದು ಎಂದು ಶಿಫಾರಸ್ಸು ಮಾಡಿರುತ್ತಾರೆ. ಸದರಿ ವಾಹನದ ತೆರಿಗೆಯನ್ನು 31.07.2006 ವರೆಗೆ ಪಾವತಿಸಲಾಗಿದೆ. ವಾಹನವು ದಿನಾಂಕ: 31.07.2006 ರಿಂದ ಅಧ್ಯರ್ಪಣದಲ್ಲಿರುತ್ತದೆ. ಈ ಮೇಲ್ಕಂಡ ಕಾರಣಗಳಿಂದ ಮೋಟಾರು ವಾಹನ ಸಂಖ್ಯೆ: ಕೆಎ–05–4781 ರ ನೋಂದಣಿಯನ್ನು ರದ್ದುಮಾಡಿ ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ: ಪ್ರಾ.ಸಾ.ಅ./ಬೆಂ(ಉ)/ಕೆಎ–05–4781/06–07, ದಿನಾಂಕ: 5ನೇ ಸೆಪ್ಟೆಂಬರ್ 2006**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ವಿಧಿ 55 (1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ.ಟಿ. ಹಾಲಸ್ವಾಮಿ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಕಾರಣಗಳಿಂದಾಗಿ, ಮೋಟಾರು ವಾಹನ ಸಂಖ್ಯೆ: ಕೆಎ–05–4781 (ಪಿ.ಎಸ್.ವಿ.) ರ ಮೇಲೆ ಏನಾದರೂ ತೆರಿಗೆ, ಆಡಿಟ್ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಮಾಡಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1 | ಮೋಟಾರು ವಾಹನ ಸಂಖ್ಯೆ | KA-05-4781 |
| 2 | ವಾಹನದ ತಯಾರಕನ ಹೆಸರು | Ashok Layland Ltd., |
| 3 | ವಾಹನದ ಮಾದರಿ | PSV-Saloon |
| 4 | ವಾಹನ ತಯಾರಿಕ ವರ್ಷ | 1987 |
| 5 | ಸಿಲಿಂಡರ್ ಸಂಖ್ಯೆ | 6 |
| 6 | ಚಾಸಿಸ್ ಸಂಖ್ಯೆ | ALEL-199458 |
| 7 | ಇಂಜಿನ್ ಸಂಖ್ಯೆ | ALEL-73563 |
| 8 | ಅಶ್ವಶಕ್ತಿ | 39.7 HP |
| 9 | ಆಸನ ಸಾಮರ್ಥ್ಯ | 49+1=50 in all |
| 10 | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಬಿ.ರಹಮತ್ತುಲ್ಲಾ ಖಾನ್, ಬಿನ್ ಲೇಟ್ ಬಿ.ಪಿ.ಬಶೀರ್ ಖಾನ್, ನ್ಯಾಷನಲ್ ಟ್ರಾವೆಲ್ಸ್ ಆಫೀಸ್, ಹೆಚ್.ಎಂ.ಟಿ. ಟೌನ್‌ಶಿಪ್, ಜಾಲಹಳ್ಳಿ, ಬೆಂಗಳೂರು. |

**ಕೆ.ಟಿ. ಹಾಲಸ್ವಾಮಿ**

ಪಿ.ಆರ್. 1609 ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ).

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಮಂಗಳೂರು ವಿಭಾಗ, ಮಂಗಳೂರು**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್–104/2006 ಎಫ್, ದಿನಾಂಕ: 30ನೇ ಅಕ್ಟೋಬರ್ 2006**

**ಅರ್ಜಿದಾರರು:**

1) ಶ್ರೀಮತಿ ಗೀತಾ ಕೋಂ ಲೇಟ್ ಟಿ.ಸುರೇಶ್
ಚೇತನ್ ಕುಮಾರ್ ಬಿನ್ ಲೇಟ್ ಟಿ.ಸುರೇಶ್
ಶ್ರೀಮತಿ ಬಿಳುಕಮ್ಮ ಕೋಂ ತಿಮ್ಮಪ್ಪ
**ವಾಸ:** ಹೆಚ್ಚೆ–ವಕ್ಕಲಕೊಪ್ಪ ಗ್ರಾಮ,
ಚಂದ್ರಗುತ್ತಿ ಹೋಬಳಿ, ಸೊರಬ ತಾಲ್ಲೂಕು.

**ಪ್ರತಿವಾದಿಗಳು:**

1) ಸಹಾಯಕ ಇಂಜಿನಿಯರ್,
ಡಿವಿಜನ್ ಆಫೀಸ್, ಮೆಸ್ಕಾಂ ಇಲಾಖೆ,
ಶಿಕಾರಿಪುರ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಗೀತಾ ಇವರು ತಮ್ಮ ಗಂಡನಾದ ಶ್ರೀ ಡಿ.ಟಿ.ಸುರೇಶ್ ಇವರು 1ನೇ ಪ್ರತಿವಾದಿಗಳಾದ ಸಹಾಯಕ ಇಂಜಿನಿಯರ್, ಡಿವಿಜನ್ ಆಫೀಸ್, ಮೆಸ್ಕಾಂ ಇಲಾಖೆ, ಶಿಕಾರಿಪುರ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 20.06.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ

ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1621 ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು.

**ವಾಣಿಜ್ಯ ತೆರಿಗೆ ಇಲಾಖೆ**

**ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ, "ವಾಣಿಜ್ಯ ತೆರಿಗೆ ಕಾರ್ಯಾಲಯ" ಗಾಂಧಿನಗರ, ಬೆಂಗಳೂರು-09**

**ರಾಜ್ಯ ಪತ್ರ ಪ್ರಕಟಣೆ**

**ಸಂಖ್ಯೆ: ವಾತೆಅಅ(ಗು.ಸ).ಉಆ.ಸಿಆರ್.ಇತರೆ/06-07, ದಿನಾಂಕ: 20ನೇ ಸೆಪ್ಟೆಂಬರ್ 2006**

ವಾಣಿಜ್ಯ ತೆರಿಗೆ ಇಲಾಖೆಯ ಗುಪ್ತವಾರ್ತೆ ದಕ್ಷಿಣ ವಲಯ, ಕೋರಮಂಗಲ, ಬೆಂಗಳೂರು ಇಲ್ಲಿ ಶ್ರೀ ಕೆ.ಎನ್.ಕರ್ನಲ್, ವಾಣಿಜ್ಯ ತೆರಿಗೆ ಅಧಿಕಾರಿ, ಚಲಿಸುವ ದಳ-7 ಇವರು ದಿನಾಂಕ: 11.09.2006 ರಂದು ಸಂಜೆ 5.45ರ ಸಮಯದಲ್ಲಿ ಎಸ್.ಪಿ.ರಸ್ತೆ ಕ್ರಾಸ್‌ನಲ್ಲಿ ಕಾರ್ಯನಿರ್ವಹಿಸುತ್ತಿರುವಾಗ ತಮ್ಮ ವಾಹನದಲ್ಲಿದ್ದ ಸೂಟ್‌ಕೇಸ್ ಮತ್ತು ಅದರಲ್ಲಿದ್ದ ಕಛೇರಿಯ ದಾಖಲೆಗಳನ್ನು ಕಳೆದು ಕೊಂಡಿರುತ್ತಾರೆ. ಕಳೆದು ಹೋದ ದಾಖಲೆಗಳು ಈ ಕೆಳಗಿನಂತಿವೆ.

1. ಕರ್ನಾಟಕ ಮೌಲ್ಯವರ್ಧಿತ ತೆರಿಗೆ ರಸೀದಿ ಪುಸ್ತಕ ನಂ.51991, ಕ್ರ.ಸಂ.2599501 ರಿಂದ 2599550 ದ್ವಿಪ್ರತಿಯಲ್ಲಿ.
2. 'ಕೆ' ನೋಟೀಸ್ ಮತ್ತು ಆದೇಶಗಳು ಉಪಯೋಗಿಸಿದ ಕ್ರ.ಸಂ.0110654 ಮತ್ತು 0110662, ಉಪಯೋಗಿಸಿಲ್ಲದ ಕ್ರ.ಸಂ.0110663 ರಿಂದ 011070.
3. ಜಿ.ಸಿ.ಹಿಂಬರಹ ಉಪಯೋಗಿಸಿರುವ (1) ಕ್ರ.ಸಂ.008647 (2) 009644 (3) 008642 (4) 008641 (5) 008632 (6) 008380 (7) 008601 ಮತ್ತು 008621 - ಉಪಯೋಗಿಸಿಲ್ಲದ ಜಿ.ಸಿ.ಹಿಂಬರಹಗಳು 1) 008650 ಮತ್ತು 10101 ರಿಂದ 10110 ರವರೆಗೆ.
4. ಕಛೇರಿಯ ದಾಖಲೆಯ ಸ್ವೀಕೃತಿ ಮೊಹರು ಮತ್ತು ವಾಣಿಜ್ಯ ತೆರಿಗೆ ಅಧಿಕಾರಿ, ಚಲಿಸುವ ದಳ-7, ಬೆಂಗಳೂರು ಸೀಲುಗಳು.

ಈ ಮೇಲ್ಕಂಡ ದಾಖಲಾತಿಗಳು ಅನುಪಯುಕ್ತವಾದವುಗಳೆಂದು ಈ ಮೂಲಕ ಘೋಷಿಸಲಾಗಿದೆ.

ವಾಣಿಜ್ಯ ತೆರಿಗೆ ಅಪರ ಆಯುಕ್ತರು,

ಪಿ.ಆರ್. 1622 (ಗುಪ್ತವಾರ್ತೆ ಮತ್ತು ಸಮನ್ವಯ), ಬೆಂಗಳೂರು.

**OFFICE OF THE DEPUTY COMMISSIONER, TUMKUR DISTRICT, TUMKUR**

**Preliminary notification DUDC (2) CR.41/06-07, Dated: 21st October 2006**

Whereas the Deputy Commissioner, Tumkur is satisfied.

I. That the area situation, S.Nos. P.T.S. Nos. Extent and boundaries and other details of which are specified in schedule below situated within the limits of City Municipal Council, Tumkur, Tumkur District, are a source of danger to the health, safety and convenience of the public of the area and of its neighborhood by reason of the said area being in sanitary, squalied and over crowded.

II. The buildings in the said area used or intended to be used for human habitation area over crowded and unfit for human habitation for want of repair, stability, freedom fromdamp; natural light and air, water supply, drainage and sanitary convenience;

It is hereby notified for the information of all persons interested in the said area that in exercise of the powers delegated in Government notification No: HUD 49 MCS 85 dated: 17th April 1986 to exercise powers under section 3 of the Karnataka Slum areas (Improvement and clearance) Act, 1973, Karnataka Act 33 of 1974 to declare the said area to be a slum area.

Any representation against the proposed action may be made to the Deputy Commissioner, Tumkur District, Tumkur within 15 days from the date of publication of this notification.

**SCHEDULE**

| Sl. No. | Name of the location of the slum | Name of the owner | Survey No. | Extent | Boundaries | |
|---|---|---|---|---|---|---|
| 1 | Dibbur Slum Area, Tumkur | Private | 8/1A | A G 5. 04 | East | Road |
| | | | | | West | Agricultural Land |
| | | | | | North | Road & Vacant land |
| | | | | | South | Road |

**S.R. UMASHANKAR**

P.R. 1623 Deputy Commissioner, Tumkur District, Tumkur.

## ವಾಣಿಜ್ಯ ತೆರಿಗೆ ಆಯುಕ್ತರು (ಕರ್ನಾಟಕ) ರವರ ನಡಾವಳಿಗಳು

**ವಿಷಯ:** ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ–2003, ವೈಟ್ ಫೀಲ್ಡ್ ರಸ್ತೆ, ಬೆಂಗಳೂರು. ರೈಲ್ವೇ ಟರ್ಮಿನಲ್ ನಲ್ಲಿ ಇನ್‌ಲ್ಯಾಂಡ್ ಕಂಟೈನರ್ ಡಿಪೋ ಹೊರ ದ್ವಾರದಲ್ಲಿ ತನಿಖಾ ಠಾಣೆಯನ್ನು ಸ್ಥಾಪಿಸುವ ಬಗ್ಗೆ.

**ಉಲ್ಲೇಖ:** ಜೆ.ಸಿ.ಸಿ.ಟಿ. (ವಿಜಿಲೆನ್ಸ್)/ಪಿಎ.ಪಿಆರ್–74 ದಿನಾಂಕ 28.10.05 ಮತ್ತು 09/06–07, ದಿನಾಂಕ: 24.04.06.

**ಪ್ರಸ್ತಾವನೆ:**

ವೈಟ್ ಫೀಲ್ಡ್‌ರಸ್ತೆ, ಬೆಂಗಳೂರು, ರೈಲ್ವೇ ಟರ್ಮಿನಲ್ ನಲ್ಲಿ ಒಂದು ತನಿಖಾ ಠಾಣೆಯ ಕಾರ್ಯ ನಿರ್ವಹಿಸುತ್ತಿದ್ದು, ಈ ತನಿಖಾ ಠಾಣೆಯು, ಇಲ್ಲಿರುವ ಇನ್‌ಲ್ಯಾಂಡ್ ಕಂಟೈನರ್ ಡಿಪೋಗೆ, ಅಂತರ ರಾಜ್ಯ ಮಾರಾಟದಿಂದಾಗಿ, ದೇಶದಿಂದ ಹೊರಗಡೆ ರಫ್ತಾಗುವಂತಹ ಮತ್ತು ಅಂತರರಾಜ್ಯ ಖರೀದಿಯಿಂದಾಗಿ ಹಾಗೂ ಹೊರ ದೇಶಗಳಿಂದ ಆಮದಾಗಿ, ಬರುವಂತಹ ಸರಕು ವಾಹನಗಳನ್ನು ತಪಾಸಣೆ ಮಾಡಿ, ಸಂಬಂಧಪಟ್ಟ ದಾಖಲೆಗಳನ್ನು ಸಂಗ್ರಹಿಸುತ್ತಿತ್ತು. ಹೀಗೆ 'ಒಳಬರುವ' ಮತ್ತು 'ಹೊರ ಹೋಗುವ' ಸರಕು ವಾಹನಗಳ ಹೆಚ್ಚಿನ ದಟ್ಟಣೆಯುಂಟಾಗಿ ಸುಲಭ ಸಾಗಾಣೆಗೆ ಅಡಚಣೆಯುಂಟಾಗುತ್ತಿದ್ದರಿಂದ, ಕಂಟೈನರ್ ಕಾರ್ಪೋರೇಷನ್ ಆಫ್ ಇಂಡಿಯಾ ಸಂಸ್ಥೆಯು ಸರಕು ನಿರ್ವಹಣೆಯಲ್ಲಿ ಕೆಲವೊಂದು ಬದಲಾವಣೆ ಮಾಡಿರುತ್ತದೆ. ಇನ್‌ಲ್ಯಾಂಡ್ ಕಂಟೈನರ್ ಡಿಪೋದಲ್ಲಿ ಸ್ವೀಕರಿಸಿದ ಸರಕು ವಾಹನಗಳು ಹೊರ ಹೋಗಲು, ಕಾರ್ಪೋರೇಷನ್ ತನ್ನ ಪ್ರಾಂಗಣದ ಪೂರ್ವ ದಿಕ್ಕಿನಲ್ಲಿರುವ ದ್ವಾರ (ಗೇಟ್) ವನ್ನು ಉಪಯೋಗಿಸಲು ಪ್ರಾರಂಭಿಸಿರುತ್ತದೆ. ಸರಕು ನಿರ್ವಹಣೆಯಲ್ಲಿನ ಸದರಿ ಬದಲಾವಣೆಯಿಂದಾಗಿ, ಪೂರ್ವ ದಿಕ್ಕಿನ ದ್ವಾರ(ಗೇಟ್)ವು ತನಿಖಾ ಠಾಣೆಗೆ ಸುಮಾರು ಅರ್ಧ ಕಿಲೋಮೀಟರ್ ದೂರದಲ್ಲಿರುವುದರಿಂದ, ಅಂತಹ ಸರಕು ವಾಹನಗಳು ಈಗಿರುವ ತನಿಖಾ ಠಾಣೆಯ ಮುಖಾಂತರ ಹಾದು ಹೋಗುತ್ತಿರುವುದಿಲ್ಲ ಮತ್ತು ಅಂತಹ ಸರಕಿಗೆ ಸಂಬಂಧಪಟ್ಟ ದಾಖಲೆಗಳನ್ನು ತನಿಖಾ ಠಾಣೆಗೆ ಲಭಿಸುತ್ತಿಲ್ಲವೆಂದು. ಇಂತಹ ಪರಿಸ್ಥಿತಿಯನ್ನು ನಿಭಾಯಿಸಲು, ಈಗಿರುವ ತನಿಖಾ ಠಾಣೆಯ ಬದಲಿಗೆ, ಇಂಡಿಯನ್ ಕಂಟೈನರ್ ಡಿಪಾರ್ಟ್‌ಮೆಂಟ್ 'ಒಳ' ಮತ್ತು 'ಹೊರ' ಎಂದು ಪ್ರತ್ಯೇಕ ತನಿಖಾ ಠಾಣೆಗಳನ್ನು ಸ್ಥಾಪಿಸಬೇಕಾದ ಅವಶ್ಯಕತೆ ಇದೆ ಎಂದು ಜಂಟಿ ಆಯುಕ್ತರು (ಜಾಗೃತಿ), ಬೆಂಗಳೂರು ರವರು ಅಭಿಪ್ರಾಯಪಟ್ಟಿರುತ್ತಾರೆ.

ಜಂಟಿ ಆಯುಕ್ತರು, ಇನ್‌ಲ್ಯಾಂಡ್ ಕಂಟೈನರ್ ಡಿಪೋ ಮತ್ತು ಹಾಲಿ ಇರುವ ತನಿಖಾ ಠಾಣೆಯ ಕಾರ್ಯ ವೈಖರಿಗಳನ್ನು ಸ್ಥಳಕ್ಕೆ ಭೇಟಿ ನೀಡಿ, ಖುದ್ದಾಗಿ ಪರಿಶೀಲನೆ ಮಾಡಿ ಮೇಲಿನಂತೆ ವರದಿ ಮಾಡಿರುತ್ತಾರೆ. ಹೀಗೆ ಪ್ರತ್ಯೇಕ ತನಿಖಾ ಠಾಣೆಗಳನ್ನು ಸ್ಥಾಪಿಸುವುದರಿಂದ 'ಹೊರ' ತನಿಖಾ ಠಾಣೆಯಲ್ಲಿ ಸಾಕಷ್ಟು ಸರಕುಗಳ ಬಗ್ಗೆ ದಾಖಲೆಗಳನ್ನು ಪಡೆಯಬಹುದಲ್ಲದೆ, ಅನೋಂದಾಯಿತ ವ್ಯಕ್ತಿಗಳಿಗೆ ಬರುತ್ತಿರುವ ವಿಶೇಷ ಪ್ರವೇಶ ತೆರಿಗೆದಾಯಕ ಸರಕುಗಳಿಗೆ ಸಂಬಂಧಪಟ್ಟಂತೆ ತೆರಿಗೆಯನ್ನು ಸಹ ವಸೂಲಿ ಮಾಡಬಹುದೆಂಬ ಅಭಿಪ್ರಾಯವನ್ನು ಸಹ ವ್ಯಕ್ತಪಡಿಸಿರುತ್ತಾರೆ. ರಾಜ್ಯದ ರಾಜಸ್ವದ ಹಿತ ದೃಷ್ಟಿಯಿಂದ ಇದು ಬಹಳ ಅವಶ್ಯಕವೆಂದು ಸಹ ತಿಳಿಸಿರುತ್ತಾರೆ. ಜಂಟಿ ಆಯುಕ್ತರ ಕೋರಿಕೆ ಸಮಂಜಸವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ: ವಾತೆಅಆ(ಗು.ಸ)ವಾತೆಅ/ಸಿಆರ್–31/05–06, ದಿನಾಂಕ: 12ನೇ ಅಕ್ಟೋಬರ್ 2006**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ 2003ರ ಕಲಂ 53(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದಂತೆ, ವೈಟ್‌ಫೀಲ್ಡ್ ರಸ್ತೆ, ಬೆಂಗಳೂರು ರೈಲ್ವೇ ಟರ್ಮಿನಲ್ ನಲ್ಲಿರುವ ಇನ್‌ಲ್ಯಾಂಡ್ ಕಂಟೈನರ್ ಡಿಪೋದಲ್ಲಿನ 'ಹೊರ' ದ್ವಾರದಲ್ಲಿ ತನಿಖಾಠಾಣೆಯನ್ನು ಸ್ಥಾಪಿಸುವುದು ಹಾಗೂ ತನಿಖಾ ಠಾಣೆಯಲ್ಲಿ ಅಂತರರಾಜ್ಯ ಸರಕು ಸಾಗಾಣಿಕೆ ವಾಹನಗಳಿಗೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ 2003ರ ಕಲಂ 54ರ ಅನ್ವಯ ರಹದಾರಿ ಪತ್ರಗಳನ್ನು ನೀಡಲು ಸಹ ಅನುಮತಿಯನ್ನು ನೀಡಿರುತ್ತೇನೆ. ಮತ್ತು ಈಗಿರುವ ಇನ್‌ಲ್ಯಾಂಡ್ ಕಂಟೈನರ್ ಡಿಪೋದಲ್ಲಿನ ಒಳ ದ್ವಾರದಲ್ಲಿ ತನಿಖಾ ಠಾಣೆಯನ್ನು ಮುಂದುವರೆಸಿ ಇದನ್ನು ಇನ್‌ಲ್ಯಾಂಡ್ ಕಂಟೈನರ್–'ಒಳ' ತನಿಖಾ ಠಾಣೆಯಾಗಿ ಕಾರ್ಯನಿರ್ವಹಿಸಲು ಆದೇಶಿಸಿದ್ದೇನೆ.

**ಬಿ.ಎ. ಹರೀಶ್ ಗೌಡ**

ಪಿ.ಆರ್. 1624 ವಾಣಿಜ್ಯ ತೆರಿಗೆ ಆಯುಕ್ತರು, ಕರ್ನಾಟಕ, ಬೆಂಗಳೂರು.

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

### ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು ಸಣ್ಣ ನೀರಾವರಿ ಗುಣ ನಿಯಂತ್ರಣ ಉಪ–ವಿಭಾಗ, ಗುಲ್ಬರ್ಗಾ

**ಸಂಖ್ಯೆ: ಗುನಿಉವಿಗು:ಆಡಳಿತ:ಮಾಹಅ:2006–07, ದಿನಾಂಕ:28ನೇ ಅಕ್ಟೋಬರ್ 2006**

1) ರಚನೆ ಕಾರ್ಯಗಳು ಹಾಗೂ ಕರ್ತವ್ಯಗಳು:

ಸಣ್ಣ ನೀರಾವರಿ ಉತ್ತರ ವಲಯ ಬಿಜಾಪೂರ ಹಾಗೂ ಸಣ್ಣ ನೀರಾವರಿ ಗುಣ ನಿಯಂತ್ರಣ ವಿಭಾಗ, ಧಾರವಾಡ ಇವರ ಅಡಿಯಲ್ಲಿ ನಿರ್ಮಾಣಗೊಳ್ಳುತ್ತಿರುವ ಸಣ್ಣ ನೀರಾವರಿ ಕೆರೆ, ಕಾಮಗಾರಿ, ಬ್ಯಾರೇಜ್ ಹಾಗೂ ಏತ ನೀರಾವರಿಗಳ ನಿರ್ಮಾಣ ಹಂತಗಳಲ್ಲಿ ಅವುಗಳಿಗೆ ಉಪಯೋಗಿಸುವ ಕಟ್ಟಡ ಸಾಮಾಗ್ರಿಗಳ ಗುಣ ನಿಯಂತ್ರಣ ಕೆಲಸ ನಿರ್ವಹಿಸುವುದು. ಈ ನಿರ್ವಹಣೆಗಾಗಿ ಈ ಉಪ–ವಿಭಾಗಗಳಲ್ಲಿ ಎರಡು ಸುಸಜ್ಜಿತ (ಗುಲ್ಬರ್ಗಾ ಮತ್ತು ಬೀದರ್) ಗಳಲ್ಲಿ ಪ್ರಯೋಗಾಲಯಗಳನ್ನು ಸ್ಥಾಪಿಸಲಾಗಿದೆ. ಪ್ರಸ್ತುತ ಈ ಉಪ–ವಿಭಾಗದ ಮುಖ್ಯಸ್ಥರಾಗಿ ಶ್ರೀ ಮಹಮ್ಮದ್ ಸೈಯಿದ್ ಅಹಮ್ಮದ್ ಖಾನ್ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ಅಧೀನದಲ್ಲಿ ಮಂಜೂರಾತಿ ಹುದ್ದೆಗಳಲ್ಲಿ 6 ಜನ ಸಹಾಯಕ ಇಂಜಿನೀಯರರು, ಒಬ್ಬ ದ್ವಿತೀಯ ದರ್ಜೆ ಸಹಾಯಕರು, ಒಬ್ಬ ವಾಹನ ಚಾಲಕ ಹಾಗೂ ಇಬ್ಬರು ಸಿಪಾಯಿಗಳು ಕಾರ್ಯ ನಿರ್ವಹಿಸುತ್ತಿದ್ದಾರೆ, ಹಾಗೂ ಹೆಚ್ಚುವರಿ ಹುದ್ದೆಗಳಲ್ಲಿ ಒಬ್ಬ ಕಿರಿಯ ಕೆಲಸ ನಿರೀಕ್ಷಕರು, 9 ಜನ ದ್ವಿತೀಯ ದರ್ಜೆ ಸಹಾಯಕರು ಒಬ್ಬ ಬೆರಳಚ್ಚುಗಾರರು ಹಾಗೂ ಒಬ್ಬ ಸಿಪಾಯಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದಲ್ಲದೆ 17 ಜನ ದಿನಗೂಲಿ ನೌಕರರು ಸಹ ಕಾರ್ಯನಿರ್ವಹಿಸುತ್ತಿದ್ದಾರೆ.

2) ಕಛೇರಿಯ ಕಾರ್ಯಗಳು ಈ ಕೆಳಗಿನಂತೆ:

ಈ ಉಪ–ವಿಭಾಗವು ಗುಲ್ಬರ್ಗಾ ಮತ್ತು ಬೀದರ್ ಜಿಲ್ಲೆಗಳಲ್ಲಿ ಸಣ್ಣ ನೀರಾವರಿ ಕಾಮಗಾರಿಗಳ ಗುಣ ನಿಯಂತ್ರಣ ಕಾರ್ಯವನ್ನು ಮಾಡುತ್ತಿದೆ.

3) ಕರ್ತವ್ಯ ನಿರ್ವಹಣೆ ಮಾರ್ಗ ಸೂಚಿ:

ಈ ಗುಣ ನಿಯಂತ್ರಣ ನಿರ್ವಹಿಸಲು ಕರ್ನಾಟಕ ಸರ್ಕಾರ ನೀರಾವರಿ ಇಲಾಖೆ ನೀಡಿರುವ ಮಾರ್ಗದರ್ಶಿಸಿಯಲ್ಲಿ ಕೆರೆಗಳ ವಿನ್ಯಾಸಕ್ಕಾಗಿ ಮಣ್ಣು ಮಾದರಿಗಳ ದಾಖಲೆ ಪರೀಕ್ಷೆಗಳನ್ನು ನಡೆಸುವುದು. ಕಾಮಗಾರಿ ಪ್ರಗತಿಯಲ್ಲಿದ್ದಾಗ ಅದಕ್ಕೆ ಉಪಯೋಗಿಸುವ ಮಣ್ಣು ಸಮರ್ಪಕವೂ ಡೋಣೆ ಎಂಬುದನ್ನು ಪರೀಕ್ಷಿಸುವುದು, ಅಲ್ಲದೇ ಕಾಂಕ್ರೀಟ್ ಹಾಗೂ ಗಾರೆ ಕೆಲಸಗಳಲ್ಲಿ ಉಪಯೋಗಿಸುವ ಖಡಿ, ಉಸುಕು ಮತ್ತು ಸಿಮೆಂಟ್‌ಗಳ ಪರೀಕ್ಷೆ ಕೈಗೊಳ್ಳುವುದು. ಈ ಎಲ್ಲಾ ಪರೀಕ್ಷೆಗಳ ಫಲಿತಾಂಶಗಳನ್ನು ಕಾಮಗಾರಿ ವಿಭಾಗಕ್ಕೂ ಹಾಗೂ ಮೇಲಾಧಿಕಾರಿಗಳಿಗೆ ಕಳುಹಿಸುವುದು ಇತ್ಯಾದಿ.

4) ಈ ಕಛೇರಿಗೆ ಸಂಬಂಧಪಟ್ಟ ಮಾಹಿತಿಯನ್ನು ಪಡೆಯಲು ಸಂಪರ್ಕಿಸಬೇಕಾದ ಅಧಿಕಾರಿ ವಿವರಗಳನ್ನು ಈ ಕಛೇರಿಯ ಅಧಿಸೂಚನಾ ಪತ್ರ ಸಂಖ್ಯೆ 460 ದಿನಾಂಕ: 19.10.2006ರ ಮೂಲಕ ಪ್ರಕಟಿಸಲಾಗಿದೆ.

5) ಈ ಉಪ–ವಿಭಾಗದಡಿಯಲ್ಲಿನ ಅಧಿಕಾರಿಗಳ ಸಿಬ್ಬಂದಿಯ ವಿವರಗಳುಳ್ಳ ಫಲಕ ಪ್ರಕಟಿಸಲಾಗಿದೆ.

6) ಅಧಿಕಾರಿ ಹಾಗೂ ಸಿಬ್ಬಂದಿಯ ವೇತನ ವಿವರ ಪ್ರಕಟಿಸಿದೆ.

7) ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2005ರ ಅಡಿಯಲ್ಲಿ ಈ ಉಪ–ವಿಭಾಗ ಕಛೇರಿಗೆ ಸಂಬಂಧಿಸಿದ ಅಧಿಕಾರಿಗಳ ವಿವರ.

| ಕ್ರ. ಸಂ. | ಅಧಿಕಾರಿಯ ಹೆಸರು ಹಾಗೂ ಪದನಾಮ | ಕರ್ತವ್ಯಗಳು | ದೂರವಾಣಿ ಸಂಖ್ಯೆ |
|---|---|---|---|
| 1) | ಶ್ರೀ ಮಹಮದ್ ಸೈಯಿದ್ ಅಹಮ್ಮದ್ ಖಾನ್, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು. | ಸಕ್ಷಮ ಪ್ರಾಧಿಕಾರ | ಮನೆ ದೂರವಾಣಿ ಸಂಖ್ಯೆ 08472 225408<br>ಕಛೇರಿ ದೂರವಾಣಿ ಸಂಖ್ಯೆ 08472 250194<br>ಮೊಬೈಲ್ ಸಂಖ್ಯೆ 986466048 |
| 2) | " ಪಿ.ಅಯ್. ಬಬಲಾದಿ, ಸಹಾಯಕ ಅಭಿಯಂತರರು | ಸಾರ್ವಜನಿಕ ಮಾಹಿತಿ ಅಧಿಕಾರಿ | ಕಛೇರಿ ದೂರವಾಣಿ ಸಂಖ್ಯೆ 08472 250194 |
| 3) | " ಪರಶುರಾಮ, ದ್ವಿತೀಯ ದರ್ಜೆ ಸಹಾಯಕ | – | " |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವವರು ಮೇಲ್ಕಂಡ ಪ್ರಾಧಿಕಾರಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ನಿಗದಿತ ಶುಲ್ಕವನ್ನು ಭರಿಸಿ ಮಾಹಿತಿಯನ್ನು ಪಡೆಯಬಹುದಾಗಿದೆ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರುರು,
ಸಣ್ಣ ನೀರಾವರಿ ಗುಣ ನಿಯಂತ್ರಣ ಉಪ–ವಿಭಾಗ, ಗುಲ್ಬರ್ಗಾ.

ಪಿ.ಆರ್. 1625

**ಜಲ ಸಂಪನ್ಮೂಲ ಇಲಾಖೆ (ಸ.ನೀ.)**

**ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ಬಿಜಾಪೂರ**

**ಅಧಿಸೂಚನೆ**

**ಸಂಖ್ಯೆ: ಮುಇಂ/ಸನೀ/(ಉ)ವ/ಬಿಜೆಪಿ/ಮಾಹ/ಸಿ–1ಎ/06–07/5541, ದಿನಾಂಕ: 4ನೇ ನವೆಂಬರ್ 2006**

ಈ ಕಛೇರಿಯಲ್ಲಿ ಶ್ರೀ ಡಿ.ಎಲ್. ತೇರಗಾಂವ ತಾಂತ್ರಿಕ ಸಹಾಯಕರು (ಉಪ ಮುಖ್ಯ ಇಂಜಿನೀಯರರು ಪ್ರಭಾರ) ಇವರಿಗೆ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ದಿನಾಂಕ: 28.9.2006 ರಂದು ಶ್ರೀ ಎಂ.ಕೆ.ನಿಂಬಾಳ ಕಾರ್ಯನಿರ್ವಾಹಕ ಅಭಿಯಂತರು ಇವರು ಈ ಕಛೇರಿಗೆ ಉಪ ಮುಖ್ಯ ಇಂಜಿನೀಯರರ ಸ್ಥಳದಲ್ಲಿ ಹಾಜರಾದ ಪ್ರಯುಕ್ತ ಶ್ರೀ ಡಿ.ಎಲ್.ತೇರಗಾಂವ ಸಾರ್ವಜನಿಕ ಮಾಹಿತಿ ಅಧಿಕಾರಿ ಇವರ ಸ್ಥಳದಲ್ಲಿ ಶ್ರೀ ಎಂ.ಕೆ.ನಿಂಬಾಳ ಉಪ ಮುಖ್ಯ ಇಂಜಿನೀಯರರು ಹಾಗೂ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ಮಾಹಿತಿ ಹಕ್ಕು ಅಧಿನಿಯಮ–2005ರ ಅಡಿಯಲ್ಲಿ ಸೆಕ್ಷನ್–5(1)ರ ಪ್ರಕಾರ ಈ ಕೆಳಗಿನಂತೆ ನೇಮಕ ಮಾಡಲಾಗಿದೆ.

| ಅನಂ | ಕಛೇರಿ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1) | ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ, ವಿಜಾಪೂರ. | ಶ್ರೀ ಎಂ.ಕೆ.ನಿಂಬಾಳ, ಉಪ ಮುಖ್ಯ ಇಂಜಿನೀಯರರು, ವಿಜಾಪೂರ | ಶ್ರೀ ಎಂ.ಎ.ಗೋಗಿ, ತಾಂತ್ರಿಕ ಸಹಾಯಕರು. | ಶ್ರೀ ಸದಾಶಿವರೆಡ್ಡಿ ಬಿ ಪಾಟೀಲ್, ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ, ವಿಜಾಪೂರ. |

**ಸದಾಶಿವರೆಡ್ಡಿ ಬಿ. ಪಾಟೀಲ್**
ಮುಖ್ಯ ಇಂಜಿನೀಯರರು,
ಸಣ್ಣ ನೀರಾವರಿ (ಉ) ವಲಯ, ವಿಜಾಪೂರ.

ಪಿ.ಆರ್. 1626

## ಆರ್ಥಿಕ ಇಲಾಖೆ
## ಅಧಿಸೂಚನೆ

**ಸಂಖ್ಯೆ: ಆಇ 44 ಟಿಎಆರ್ 2006, ದಿನಾಂಕ: 18ನೇ ಅಕ್ಟೋಬರ್ 2006**

ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ಕರಡು ನಿಯಮಗಳು, 2006ನ್ನು, ಕರ್ನಾಟಕ ಸರ್ಕಾರವು ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ಅಧಿನಿಯಮ 2004 (2005ರ ಕರ್ನಾಟಕ ಅಧಿನಿಯಮ 30)ರ 21ನೇ ಪ್ರಕರಣದ 1ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಅಗತ್ಯಪಡಿಸಲಾದಂತೆ, ಇದರಿಂದ ಬಾಧಿತರಾಗುವ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಮತ್ತು ಗಮನಕ್ಕಾಗಿ ಪ್ರಕಟಪಡಿಸಲು ಉದ್ದೇಶಿಸಿದೆ ಮತ್ತು ಇದನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಪಡಿಸಿದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಸದರಿ ಕರಡನ್ನು ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚಿಸಲಾಗಿದೆ.

ಮೇಲೆ ನಿರ್ದಿಷ್ಟಪಡಿಸಲಾದ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಸದರಿ ಕರಡಿಗೆ ಸಂಬಂಧಿಸಿದಂತೆ ಯಾರೇ ವ್ಯಕ್ತಿಯಿಂದ ಕರ್ನಾಟಕ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು, ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು–560 001 ಇವರಿಗೆ ಕಳಿಸಬಹುದಾಗಿದೆ.

### ಕರಡು ನಿಯಮಗಳು

1. **ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ನಿಯಮಗಳು, 2006 ಎಂದು ಕರೆಯತಕ್ಕದ್ದು.

(2) ಈವು ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು.–** ಈ ನಿಯಮಗಳಲ್ಲಿ ಅನ್ಯಥಾ ಅಗತ್ಯಪಡಿಸಿದ ಹೊರತು:

1) ಅಧಿನಿಯಮ ಎಂದರೆ, ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ಅಧಿನಿಯಮ, 2004 (2005ರ ಕರ್ನಾಟಕ ಅಧಿನಿಯಮ, 30) ಎಂದು ಕರೆಯತಕ್ಕದ್ದು.

2) ಬಳಸಿರುವ ಆದರೆ ಪರಿಭಾಷಿಸದ ಪದಗಳು, ಈ ಅಧಿನಿಯಮದಲ್ಲಿ ಅವುಗಳಿಗೆ ನೀಡಲಾದ ಅದೇ ಅರ್ಥವನ್ನು ಹೊಂದಿರತಕ್ಕದ್ದು.

3. **ತಾತ್ಕಾಲಿಕ ಆದೇಶ ಮತ್ತು ದೂರು ನೀಡಿದವನ ಮತ್ತು ಸಾಕ್ಷಿಗಳ ವಿಚಾರಣೆ.–** 3ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಸರ್ಕಾರದ ಆದೇಶಗಳನ್ನು ಸ್ವೀಕರಿಸಿದ ತರುವಾಯ, ಸಕ್ಷಮ ಪ್ರಾಧಿಕಾರವು, ದೂರು ನೀಡಿದವನನ್ನು ವಿಚಾರಣೆ ಮಾಡಬಹುದು ಮತ್ತು ವಿಚಾರಣೆಯನ್ನು ಬರಹದಲ್ಲಿ ದಾಖಲಿಸತಕ್ಕದ್ದು.

4. **ತಲೆಮರೆಸಿಕೊಂಡಿರುವ ವ್ಯಕ್ತಿಗಳಿಗೆ ಸಂಬಂಧಪಟ್ಟಂತೆ ಅಧಿಕಾರಗಳು.–** ಸಕ್ಷಮ ಪ್ರಾಧಿಕಾರ ಈ ಅಧಿನಿಯಮದ ಅಡಿಯಲ್ಲಿ, ಕ್ರಮ ಕೈಗೊಳ್ಳಲು ಆಲೋಚಿಸಲಾದ ವ್ಯಕ್ತಿಯು, ತಲೆಮರೆಸಿಕೊಂಡಿದ್ದಾನೆಂದು ಅಥವಾ ಬಚ್ಚಿಟ್ಟುಕೊಂಡಿದ್ದಾನೆಂದು ಮನದಟ್ಟಾದಲ್ಲಿ ಅಥವಾ ಅದನ್ನು ನಂಬಲು ಕಾರಣಗಳಿದ್ದಲ್ಲಿ, ಸಕ್ಷಮ ಪ್ರಾಧಿಕಾರವು, ವಿಶೇಷ ನ್ಯಾಯಾಲಯಕ್ಕೆ ಲಿಖಿತದಲ್ಲಿ ವರದಿ ಮಾಡತಕ್ಕದ್ದು.

5. **ಆಸ್ತಿಯನ್ನು ಸ್ಥಗಿತಗೊಳಿಸುವ ಅಥವಾ ವಶಪಡಿಸಿಕೊಳ್ಳುವ ಅಧಿಕಾರಗಳು.–** ಈ ಅಧಿನಿಯಮದ ಅಡಿಯಲ್ಲಿ ಜಪ್ತಿಗೆ ಒಳಗಾಗಲು ಬದ್ಧವಾಗಿರುವ ಯಾವುದೇ ಆಸ್ತಿಯನ್ನು ಯಾವುದೇ ರೀತಿಯಲ್ಲಿ ಬಚ್ಚಿಡುವ, ವರ್ಗಾಯಿಸುವ ಅಥವಾ ವ್ಯವಹರಿಸುವ ಸಂಭವವಿದೆಯೆಂದು ಮತ್ತು ಇದು ಅಧಿನಿಯಮದ ಉದ್ದೇಶವನ್ನು ವಿಫಲಗೊಳಿಸುತ್ತದೆಂದು ಸಕ್ಷಮ ಪ್ರಾಧಿಕಾರಕ್ಕೆ ಮನದಟ್ಟಾದರೆ ಅಥವಾ ನಂಬಲು ಕಾರಣವಿದ್ದರೆ, ಅಂಥ ಆಸ್ತಿಯನ್ನು ವಶಪಡಿಸಿಕೊಳ್ಳುವ ಆದೇಶವನ್ನು ಮಾಡಬಹುದು ಅಥವಾ ಅಂಥ ಆಸ್ತಿಯನ್ನು ವಶಪಡಿಸಿಕೊಳ್ಳಲು ಸಾಧ್ಯವಿಲ್ಲದಿರುವಲ್ಲಿ ಅಂಥ ಆಸ್ತಿಯನ್ನು ವಿಶೇಷ ನ್ಯಾಯಾಲಯದ ಪೂರ್ವಾನುಮೋದನೆಯ ಹೊರತು, ವರ್ಗಾಯಿಸತಕ್ಕದ್ದಲ್ಲ ಅಥವಾ ಅನ್ಯಥಾ ವ್ಯವಹರಿಸತಕ್ಕದ್ದಲ್ಲವೆಂಬ ಆದೇಶವನ್ನು ಮಾಡತಕ್ಕದ್ದು.

6. **ಹಣಕಾಸು ಅಥವಾ ಇತರ ಆಸ್ತಿಯ ಜಪ್ತಿಗೆ ಆದೇಶ ಮಾಡಿದಾಗ ವರ್ಗಾವಣೆಗಳು ಶೂನ್ಯ.–** ಅಧಿನಿಯಮದ 3ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರವು, ಒಂದು ಹಣಕಾಸು ಸಂಸ್ಥೆಯ ಹಣಕಾಸು ಅಥವಾ ಇತರ ಆಸ್ತಿಯನ್ನು ಜಪ್ತಿಮಾಡಲು ತಾತ್ಕಾಲಿಕ ಆದೇಶವನ್ನು ಮಾಡಿರುವಾಗ, ಆದೇಶದಲ್ಲಿ ಉಲ್ಲೇಖಿಸಲಾದಂಥ ಹಣಕಾಸು ಅಥವಾ ಆಸ್ತಿಯನ್ನು, ಯಾವುದೇ ರೀತಿಯಲ್ಲಿ ಇತರ ಯಾರೇ ವ್ಯಕ್ತಿಗಳಿಗೆ ವರ್ಗಾಯಿಸತಕ್ಕದ್ದಲ್ಲ ಮತ್ತು ಅಂಥ ವರ್ಗಾವಣೆಯನ್ನು ಮಾಡಿದ್ದರೆ, ಅದು ಆಕೃತ ಹಾಗೂ ಶೂನ್ಯವಾಗತಕ್ಕದ್ದು.

7. **ಸಕ್ಷಮ ಪ್ರಾಧಿಕಾರವು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರನಿಗೆ ನೆರವಾಗುವುದು.–** ಸಕ್ಷಮ ಪ್ರಾಧಿಕಾರವು, ವಿಶೇಷ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ನಡೆಸುವುದಕ್ಕೆ ಅಗತ್ಯ ಪಡಿಸಲಾದಂತೆ ನೆರವನ್ನು ವಿಶೇಷ ಪಬ್ಲಿಕ್ ಪ್ರಾಸಿಕ್ಯೂಟರನಿಗೆ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1627

**ಸಿ. ಶಾಮರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
(ಎಫ್.ಆರ್. ಮತ್ತು ಬಿಸಿಸಿ) ಆರ್ಥಿಕ ಇಲಾಖೆ.

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ: ಇ(1)276/2006–07/ಪಿಎಸ್‌ಸಿ, ದಿನಾಂಕ: 15ನೇ ನವೆಂಬರ್ 2006**

**ವಿಷಯ:** 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀ ಮಹಮ್ಮದ್ ರಫಿ ಪಾಶ (ನೋಂ.ಸಂ.123878) ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1) ಶ್ರೀ ಮಹಮ್ಮದ್ ರಫಿ ಪಾಶ ಇವರು 2005ನೇ ಸಾಲಿಗೆ ಗೆಜೆಟೆಡ್ ಪ್ರೊಬೆಷನರ್ಸ್ ಹುದ್ದೆಗೆ ಸಲ್ಲಿಸಿದ ಅರ್ಜಿ.
2) ಸದರಿ ಅಭ್ಯರ್ಥಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಆರ್.ಹೆಚ್.ಎಸ್.266/ 2005–06/ಪಿಎಸ್‌ಸಿ, ದಿನಾಂಕ: 26.04.2006.
3) ಸದರಿ ಅಭ್ಯರ್ಥಿಯು ದಿನಾಂಕ: 02.05.2006 ರಂದು ಸಲ್ಲಿಸಿರುವ ಕಾರಣ ಕೇಳುವ ನೋಟೀಸಿಗೆ ಉತ್ತರ.
4) ಸದರಿ ಅಭ್ಯರ್ಥಿಯು ದಿನಾಂಕ: 07.08.2006 ರಂದು ವಿಚಾರಣಾಧಿಕಾರಿಗಳ ಮುಂದೆ ನೀಡಿರುವ ಸಾಕ್ಷ್ಯ.
5) ವಿಚಾರಣಾ ವರದಿ ದಿನಾಂಕ: 23.08.2006.

**ಪ್ರಸ್ತಾವನೆ:**

ಮೇಲೆ ಓದಲಾದ (1) ರನ್ವಯ ಶ್ರೀ ಮೊಹಮ್ಮದ್ ರಫಿ ಪಾಶ ಇವರು 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಸದರಿ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ: 123878ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಅದರಂತೆ ಇವರು ಸಾಮಾನ್ಯ ಅಧ್ಯಯನ ಭಾಗ–1 ಮತ್ತು ಭಾಗ–2ರ ಉತ್ತರ ಪತ್ರಿಕೆಗಳಲ್ಲಿನ ಕೆಲವು ಸಾಲುಗಳನ್ನು ಪಿಂಕ್ ಬಣ್ಣದ ಶಾಯಿಯ ಮೂಲಕ ಹೈಲೈಟ್ ಮಾಡಿದ್ದರಿಂದ ಮೇಲೆ ಓದಲಾದ (2) ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಉತ್ತರವಾಗಿ ಶ್ರೀ ಮಹಮ್ಮದ್ ರಫಿ ಪಾಶರವರು ತಾನು ಯಾವುದೇ ದುರುದ್ದೇಶದಿಂದ ಈ ತಪ್ಪನ್ನು ಎಸಗಿಲ್ಲವೆಂದು ಲಿಖಿತ ಹೇಳಿಕೆ ಸಲ್ಲಿಸಿದ್ದರಿಂದ ಇವರ ವಿರುದ್ಧ ವಿಚಾರಣೆ ನಡೆಸಿ ವರದಿ ನೀಡುವಂತೆ, ಶ್ರೀ ಎಸ್. ಅನಂತಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಅಧಿಸೂಚನೆ ಹೊರಡಿಸಲಾಗಿತ್ತು.

ಸದರಿ ಅಭ್ಯರ್ಥಿಯು "ನಾನು ಉತ್ತರ ಪತ್ರಿಕೆಯಲ್ಲಿ ಎಲ್ಲಿಯೂ ಸಹ ನನ್ನ ನೋಂದಣಿ ಸಂಖ್ಯೆಯನ್ನಾಗಲೀ, ಹೆಸರನ್ನಾಗಲೀ ನನ್ನ ಧರ್ಮ, ಲಿಂಗ ಮತ್ತಿತರ ವೈಯಕ್ತಿಕ ಸಂಖ್ಯೆ, ವಿಳಾಸ ಯಾವುದೇ ರೀತಿಯ ಗುರುತನ್ನು ಮಾಡಿಲ್ಲ. ನನಗೆ ಮುಖ್ಯ ಎನಿಸಿದ ಕೆಲವು ಸಾಲುಗಳನ್ನು ಮೌಲ್ಯಮಾಪಕರ ಗಮನ ಸೆಳೆಯಲು ಹೈಲೈಟ್ ಮಾಡಿದ್ದೆ, ಐಚ್ಛಿಕ ವಿಷಯಗಳ ಪತ್ರಿಕೆಗಳಲ್ಲಿಯೂ ಸಹ ನಾನು Under line ಮಾಡಿದ್ದು, ಕಾಲಾವಕಾಶ ಇಲ್ಲದುದರಿಂದ ಹೈಲೈಟ್ ಮಾಡಿರುವುದಿಲ್ಲ. ಆದ್ದರಿಂದ ತಾವು ದಯವಿಟ್ಟು ನನ್ನನ್ನು ದಂಡಿಸದೆ, ನನ್ನ ಅಭ್ಯರ್ಥಿತ್ವವನ್ನು ರದ್ದುಗೊಳಿಸಬಾರದೆಂದು ಕೋರಿರುತ್ತಾರೆ.

ಅಭ್ಯರ್ಥಿಯ ಹೇಳಿಕೆ ಮತ್ತು ಲಭ್ಯ ಇದ್ದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ವಿಚಾರಣಾಧಿಕಾರಿಗಳು ದಿನಾಂಕ: 23.08.2006ರ ತಮ್ಮ ವರದಿಯಲ್ಲಿ ಅಭ್ಯರ್ಥಿಯ ಮೇಲೆ ಮಾಡಲಾದ ಆರೋಪವು ಸಾಬೀತಾಗಿದೆ ಎಂದು ತಮ್ಮ ವರದಿಯನ್ನು ನೀಡಿದ್ದು ಆಯೋಗವು ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಂತೆ ದಂಡನೆ ವಿಧಿಸಲು ಆದೇಶಿಸಿದೆ.

**ಆದೇಶ ಸಂಖ್ಯೆ: ಇ(1)277/2006–07/ಪಿಎಸ್‌ಸಿ, ಬೆಂಗಳೂರು, ದಿನಾಂಕ: 15ನೇ ನವೆಂಬರ್ 2006**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ಪಿಎಸ್‌ಸಿ, ದಿನಾಂಕ: 14.09.1993 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಮಹಮ್ಮದ್ ರಫಿ ಪಾಶ, 4/1 13ನೇ ಕ್ರಾಸ್, ಕರೀಮ್ ಮಂಜಿಲ್, ಜಯನಗರ 2ನೇ ಬ್ಲಾಕ್, ಬೆಂಗಳೂರು ದಕ್ಷಿಣ–560 011. ಇವರ 2005ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್. 1629

**ಹೆಚ್.ಬಿ. ಚನ್ನರಾಜು**

ಕಾರ್ಯದರ್ಶಿ (ಪ್ರಭಾರ), ಕರ್ನಾಟಕ ಲೋಕ ಸೇವಾ ಆಯೋಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡಿರುವ ಅಹ್ಮದೀಯ ಮೈನಾರಿಟೀಸ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಹರಿಹರ, ಹರಿಹರ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**
1) ಈ ಕಛೇರಿ ಸಮ ಸಂಖ್ಯೆ ಆದೇಶ ದಿನಾಂಕ: 30.10.2004.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 3.11.2006.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಕ್ರಮ ಸಂಖ್ಯೆ: ಎಆರ್31/ಆರ್‌ಜಿಎನ್/26097/99–2000, ದಿನಾಂಕ: 17.6.1999 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು

ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಸಹ ಸಂಘದ ನೊಂದಣಿಯನ್ನು ರದ್ದುಗೊಳಿಸಲು ಶಿಫಾರಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್-07:03-04, ದಿನಾಂಕ: 8ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಅಹ್ಮದೀಯ ಮೈನಾರಿಟೀಸ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಹರಿಹರ, ಹರಿಹರ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಬಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 8.11.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1630

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಮೇಳನಾಯ್ಕನಕಟ್ಟೆ, ಚೆನ್ನಗಿರಿ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/12/06-07, ದಿನಾಂಕ: 23.05.2006.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ: 07.11.2006.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಕ್ರಮ ಸಂಖ್ಯೆ: ಎಆರ್/31/ಆರ್‌ಜಿಎನ್/29097/2000-2001, ದಿನಾಂಕ: 27.12.2000 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಸಹ ಸಂಘದ ನೊಂದಣಿಯನ್ನು ರದ್ದುಗೊಳಿಸಲು ಶಿಫಾರಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್-12:06-07, ದಿನಾಂಕ: 8ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಚನ್ನಗಿರಿ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಬಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 8.11.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1631

**ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 305/ಸಂ.ವಿ./ಸಿ.ಒ.ಪಿ/2006, ದಿನಾಂಕ: 12ನೇ ನವೆಂಬರ್ 2006**

ಬೆಂಗಳೂರು ನಗರ ಬಸವನಗುಡಿ ಸಂಚಾರ ಪೊಲೀಸ್ ಠಾಣೆಗೆ ಸೇರಿದ ಆರ್.ವಿ. ರಸ್ತೆಯು ದಕ್ಷಿಣದಿಂದ ಉತ್ತರಕ್ಕೆ ಹಾದು ಹೋಗಿದ್ದು, ಸದರಿ ರಸ್ತೆಯ ಉದ್ದ ಸುಮಾರು 1 ಕಿ.ಮೀ. ಇರುತ್ತದೆ. ರಸ್ತೆಯ ಮಧ್ಯ ಭಾಗದಲ್ಲಿ ಅಂದರೆ ಸೌತ್ ಎಂಡ್ ವೃತ್ತದವರೆವಗಿಗೆ ಸುಮಾರು ಎರಡೂವರೆ ಅಡಿ ಅಗಲದ ರಸ್ತೆ ವಿಭಜಕವನ್ನು ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಹಾಕಿರುತ್ತಾರೆ. ಇದರಿಂದ ಪಶ್ಚಿಮ ಮತ್ತು ಪೂರ್ವ ಭಾಗದ ರಸ್ತೆಯು ಸುಮಾರು 30 ಅಡಿ ಇರುತ್ತದೆ. ಸದರಿ ರಸ್ತೆಯು ನಗರದ ದಕ್ಷಿಣ ಭಾಗದಿಂದ ಕೇಂದ್ರ ಉತ್ತರ ಮತ್ತು ಪಶ್ಚಿಮ ಭಾಗಗಳಿಗೆ ಸಂಚಾರ ವ್ಯವಸ್ಥೆಯನ್ನು ಕಲ್ಪಿಸುವ ಅತಿಮುಖ್ಯವಾದ ರಸ್ತೆಯಾಗಿದ್ದು ಆರ್.ವಿ.ವೃತ್ತ ಹಾಗೂ ಲಾಲ್‌ಬಾಗ್ ಪಶ್ಚಿಮ ದ್ವಾರದ ಬಳಿ ವಾಹನ ದಟ್ಟಣೆ ಬಹಳಷ್ಟು ಪೀಕ್ ಹವರ್ಸ್‌ನಲ್ಲಿ ಕಂಡು ಬರುತ್ತದೆ ಹಾಗೂ ಪೂರ್ವ ಮತ್ತು ಪಶ್ಚಿಮ ಭಾಗದ ಎರಡೂ ಕಡೆಗಳಲ್ಲಿ ವಾಣಿಜ್ಯ ಸಂಕೀರ್ಣಗಳು ಶಿಕ್ಷಣ ಸಂಸ್ಥೆಗಳು ಮತ್ತು ಪೆಟ್ರೋಲ್ ಬಂಕ್‌ಗಳು ಇರುತ್ತವೆ ಹಾಗೂ ಸೌತ್ ಎಂಡ್ ವೃತ್ತದಿಂದ ಆರ್.ವಿ. ವೃತ್ತದವರೆವಿಗೆ 9 ಅಡ್ಡ ರಸ್ತೆಗಳು ಇರುತ್ತವೆ.

ಅಂತೆಯೇ ಆರ್.ವಿ. ವೃತ್ತದಿಂದ ಲಾಲ್‌ಬಾಗ್ ಪಶ್ಚಿಮ ದ್ವಾರದ ವರೆವಿಗೆ 2 ಅಡ್ಡರಸ್ತೆಗಳಿರುತ್ತವೆ. ಆರ್.ವಿ. ವೃತ್ತದ ಬಳಿ ಅಶೋಕ ಪಿಲ್ಲರ್ ಹುತ್ತದ ವೃತ್ತದವರೆವಿಗೆ ಸುಮಾರು 400 ಅಡಿ ಉದ್ದವಿರುತ್ತದೆ. ಸದರಿ ರಸ್ತೆಯ ಅಗಲ 58 ಅಡಿ ಇದ್ದು, ಪಾದಚಾರಿ ರಸ್ತೆಯ ಅಗಲ 18 ಅಡಿ ಇದ್ದು ಮತ್ತು ಅದರ ಹಿಂದಿನ ಚರಂಡಿ ಮೇಲೆ 7 ಅಡಿ ಅಗಲದ ಹಾಸುಗಲ್ಲು ಹಾಕಲಾಗಿದೆ. ಆದ್ದರಿಂದ ಈ ಮೇಲೆ ತಿಳಿಸಿದ 11 ಅಡ್ಡರಸ್ತೆಗಳಲ್ಲಿ ಕನಕನಪಾಳ್ಯ ರಸ್ತೆಯಲ್ಲಿರುವ ಪಾದಚಾರಿ ರಸ್ತೆ ಮೇಲೆ ದ್ವಿಚಕ್ರ ವಾಹನಗಳನ್ನು ನಿಲ್ಲಿಸಲು ಯೋಗ್ಯವಾಗಿರುತ್ತದೆ. ಆದ್ದರಿಂದ ಆರ್.ವಿ. ರಸ್ತೆಯಲ್ಲಿ ದ್ವಿಚಕ್ರ ಮತ್ತು ನಾಲ್ಕು ಚಕ್ರದ ವಾಹನಗಳನ್ನು ಸಂಪೂರ್ಣವಾಗಿ ವಾಹನ ನಿಲುಗಡೆ ನಿಷೇಧಿತ ರಸ್ತೆಯನ್ನಾಗಿ ಮಾಡುವುದು ಅತ್ಯವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3, ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ಬೆಂಗಳೂರು ನಗರದ ಪೊಲೀಸ್ ಕಮೀಷನರ್ ಎನ್.ಅಚ್ಯುತರಾವ್ ಆದ ನಾನು ಈ ಕೆಳಕಂಡ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

**ಆರ್.ವಿ. ರಸ್ತೆಯಲ್ಲಿ ದ್ವಿಚಕ್ರ ಮತ್ತು ನಾಲ್ಕು ಚಕ್ರ ವಾಹನಗಳನ್ನು ಸಂಪೂರ್ಣವಾಗಿ ವಾಹನ ನಿಲುಗಡೆ ನಿಷೇಧಿತ ರಸ್ತೆಯನ್ನಾಗಿ ಮಾಡಿ ಈ ವ್ಯವಸ್ಥೆಯನ್ನು ಜಾರಿಗೆ ತಲು ಆದೇಶವನ್ನು ಹೊರಡಿಸಿರುತ್ತೇನೆ.**

ಅಂತೆಯೆ 1988ನೇ ಮೋಟಾರು ವಾಹನದ ಕಾಯ್ದೆ ಕಲಂ 116 ಹಾಗೂ 1960ನೇ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ ಕಲಂ 4 ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಅಗತ್ಯವಾದ ಸೂಚನಾ ಫಲಕಗಳನ್ನು ಅಗತ್ಯ ಸ್ಥಳಗಳಲ್ಲಿ ಹಾಕಿಸಲು ಸ್ಥಳೀಯ ಪೊಲೀಸ್ ನವರಿಗೆ ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 12.11.2006 ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಎನ್. ಅಚ್ಯುತರಾವ್**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1632

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE UNDER SECTION 59(4) OF THE KARNATAKA VALUE ADDED TAX ACT, 2003**

**Subject:** KVAT Act 2003 - Clarification under Section 59(4) regarding the rate of tax applicable on 'Software licenses'.

**Ref:** Application dated: 18.10.2006 of M/s Sonata Information Technology Limited.

In his application cited at reference above, the applicant has sought clarification regarding the rate of tax applicable on 'software licences'.

2. Section 59(4) of the Karantaka Value Added Tax Act, 2003 empowers the commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION No. CLR.CR.164/06-07, Dated: 10th November 2006**

It is hereby clarified that 'software licenses' covered by Central Excise Tariff Code 4907 00 30 are taxable at 12.5% under section 4(1)(b) of Karnataka Value Added Tax Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

P.R. 1633

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE**

**CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Subject:** KVAT Act 2003 - Clarification under Section 59(4) regarding the rate of tax applicable on "dates syrup".

**Ref:** Application dated: 09.08.2006 of M/s Lion Dates Impex Private Limited, No.495/1, Ward No.96, 1st Main, Bhuvaneswari Nagar, Sulthanpalya Main Road, R.T.Nagar, Bangalore-560 032.

In its application cited at reference above, the applicant has sought clarification regarding rate of tax applicable on "dates syrup".

2. Section 59(4) of the Karantaka Value Added Tax Act, 2003 empowers the commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION No. CLR.CR.126/06-07, Dated: 13th November 2006**

It is hereby clarified that "dates syrup" is taxable at 4% as per Sl.No.3 of the Third Schedule to the Karnataka Value Added Tax Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

P.R. 1634

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE**

**CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Subject:** KVAT Act 2003 - Clarification under Section 59(4) regarding the rate of tax applicable on hiring of industrial power generator sets.

**Ref:** Application dated: 19.08.2006 of M/s Canara Power Services, "Simona", N.H.17, Kottara Chowki, Mangalore-575 006.

In his application cited at reference above, the applicant-dealer has sought clarification regarding the rate of tax applicable on hiring of industrial power generator sets.

(2) Section 59(4) of the Karantaka Value Added Tax Act, 2003 empowers the commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

(3) Hence the following clarification is issued.

**CLARIFICATION No. CLR.CR.137/06-07, Dated: 10th November 2006**

It is hereby clarified that transfer of right to use of industrial power generator sets of 15 KVA and above (covered under Central Excise Tariff Code 8502) is taxable at 4% VAT as specified in Sl.No.35 of the table in the Notification No. FD 316 CSL 2005(1), dated: 5.8.2005 and transfer of right to use of industrial power generator sets of less than 15 KVA is taxable at 12.5% VAT under Section 4(1)(b) of the Karnataka Value Added Tax Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

P.R. 1635

**COMMERCIAL TAX DEPARTMENT**
**ASST. COMMR. OF COMML. TAXES, (L.V.O-100), M.M.TRUST, CHAMARAJAPET, BANGALORE**
**NOTIFICATION**
**No. /2006-07, Dated: 2nd November 2006**

In pursuance of the provision contained in Sub Rule (2) of Rule 12 of CST Act (Karnataka) 1956, it is hereby notified for general informations that, the declaration in Form "C" shown below are declared to be obsolute and invalid.

| Sl. No. | Name of the Authority issuing Declaration Form | Name & Address of the dealer to whom declaration Forms are issued by the Dept. with TIN/CST No. | Name of the declaration Forms and Number (including Code No) of the declaration Forms declared as obsolute & invalid | Date of issue to the Dealer | Whether lost/ Destroyed/ Stolen | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | L.V.O-100 CHAMARAJAPET BANGALORE | M/s. Prince Systems (Bangalore) No.19, Nehru Road, 2nd Cross, New Guddadhahally Bangalore-26 | **"C" FORMS** TCK-3378158 TCK-3378159 TCK-3378160 TCK-3378161 | 10.03.2006 | Lost in their custody | The lost "C" Forms declared obsolute & invalid |

**G. VISHWANATHA**
Asst. Commr. of Comml. Taxes, (L.V.O-100),
M.M.Trust, Chamarajapet, Bangalore.

P.R. 1636

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್:01:1990**

**ಅರ್ಜಿದಾರರು:** ಶ್ರೀಮತಿ ಚೆಲುವಮ್ಮ ಕೋಂ ವೆಂಕಟೇಶ, ವಾಸ: ನಾರಾಯಣಪುರ, ಬಸವನಹಳ್ಳಿ, ಚಿಕ್ಕಮಗಳೂರು.

**ವಿರುದ್ಧ**

**ಪ್ರತಿವಾದಿಗಳು:** ಮೆ: ಹೆಚ್. ದಾಸಪ್ಪ ಮತ್ತು ಮಕ್ಕಳು, ಅಬಕಾರಿ ಗುತ್ತಿಗೆದಾರರು, ದಕ್ಷಿಣ ವೃತ್ತ, ಬೆಂಗಳೂರು.

**ಪ್ರಕಟಣೆ**

ದಿನಾಂಕ: 21.11.1991 ರಂದು ಹೊರಡಿಸಲಾದ ಈ ನ್ಯಾಯಾಲಯದ ಆದೇಶದಲ್ಲಿ ಪ್ರತಿವಾದಿಗಳು ಅರ್ಜಿದಾರರಾದ ಶ್ರೀಮತಿ ಚಲುವಮ್ಮ ಮತ್ತು ಮಕ್ಕಳಿಗೆ 78,824=00 ರೂ.ಗಳ ಪರಿಹಾರ ಹಾಗೂ 19,706=00 ರೂ.ಗಳ ದಂಡವನ್ನು ನೀಡುವಂತೆ ಆದೇಶಿಸಲಾಗಿದೆ.

ಅರ್ಜಿದಾರರಾದ ಶ್ರೀಮತಿ ಚಲುವಮ್ಮ ಕೋಂ ವೆಂಕಟೇಶ ಅವರನ್ನು ಹೊರತುಪಡಿಸಿ ಈ ವರೆಗೆ ಬೇರೆ ಯಾರೂ ಕ್ಲೈಮ್ ಅರ್ಜಿಯನ್ನು ದಾಖಲಿಸಿರುವುದಿಲ್ಲ. ಆದ ಕಾರಣ, ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಮೃತರ ವಾರಸುದಾರರು ಯಾರಾದರೂ ಇದ್ದಲ್ಲಿ ಪರಿಹಾರವನ್ನು ಕೋರಿ ತಕರಾರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಬಹುದಾಗಿದೆ. ಅವಧಿ ಮೀರಿದ ನಂತರ ಬರುವ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-1, ಚಿಕ್ಕಮಗಳೂರು.

ಪಿ.ಆರ್. 1637

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್:10:2003**

**ಅರ್ಜಿದಾರರು:** ಶ್ರೀ ಹೆಚ್.ಎಸ್.ಬಸವರಾಜು ಬಿನ್ ಹೀರಯ್ಯ, ಹಾರ್ಜಿಹಳ್ಳಿ ಗ್ರಾಮ ಮತ್ತು ಅಂಚೆ, ಆವತಿ ಹೋಬಳಿ, ಚಿಕ್ಕಮಗಳೂರು ತಾ:

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ಹೆಚ್.ಎಸ್.ಕಾಳಾಚಾರಿ ಬಿನ್ ಶೇಷಾದ್ರಿ, ಹಾರ್ಜಿಹಳ್ಳಿ ಗ್ರಾಮ, ಆವತಿ ಹೋಬಳಿ, ಚಿಕ್ಕಮಗಳೂರು ತಾಲ್ಲೂಕು.
2) ಮೆ: ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂಪೆನಿ, ಲಿಮಿಟೆಡ್, ಚಿಕ್ಕಮಗಳೂರು.

**ಪ್ರಕಟಣೆ**

ದಿನಾಂಕ: 27.02.2004 ರಂದು ಹೊರಡಿಸಲಾದ ಈ ನ್ಯಾಯಾಲಯದ ಆದೇಶದಲ್ಲಿ ಪ್ರತಿವಾದಿಗಳು ಅರ್ಜಿದಾರರಾದ ಶ್ರೀ ಹೆಚ್.ಎಸ್.ಬಸವರಾಜುರವರಿಗೆ 3,36,000=00 ಗಳ ಪರಿಹಾರ ನೀಡುವಂತೆ ಆದೇಶಿಸಲಾಗಿದೆ.

ಅರ್ಜಿದಾರರಾದ ಶ್ರೀ ಹೆಚ್.ಎಸ್.ಬಸವರಾಜು ಅವರನ್ನು ಹೊರತುಪಡಿಸಿ ಈ ವರೆಗೆ ಬೇರೆ ಯಾರೂ ಕ್ಲೈಮ್ ಅರ್ಜಿಯನ್ನು ದಾಖಲಿಸಿರುವುದಿಲ್ಲ. ಆದ ಕಾರಣ, ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ

ಒಳಗಾಗಿ ಮೃತರ ವಾರಸುದಾರರು ಯಾರಾದರೂ ಇದ್ದಲ್ಲಿ ಪರಿಹಾರವನ್ನು ಕೋರಿ ತಕರಾರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಬಹುದಾಗಿದೆ. ಅವಧಿ ಮೀರಿದ ನಂತರ ಬರುವ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-2, ಚಿಕ್ಕಮಗಳೂರು.

ಪಿ.ಆರ್. 1638

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್:10:2004**

**ಅರ್ಜಿದಾರರು:**

1) ಶ್ರೀಮತಿ ಯಶೋದ ಕೋಂ ಲೇಟ್ ರಮೇಶ
2) ಶ್ರೀ ರಂಗಯ್ಯ
3) ಶ್ರೀಮತಿ ನಂಜುಂಡಮ್ಮ ಕೋಂ ರಂಗಯ್ಯ
4) ಮಾ: ಪುನೀತ್ 5) ಮಾ: ಪೃಥ್ವಿ

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ಸತೀಶ ನಾಯ್ಡು ಬಿನ್ ನಾಗರಾಜನಾಯ್ಡು, ತಿಮ್ಮೇಗೌಡ ಕಾಂಪೌಂಡ್, ಮಾರ್ಕೆಟ್ ರಸ್ತೆ, ಚಿಕ್ಕಮಗಳೂರು.
2) ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಚಿಕ್ಕಮಗಳೂರು.

**ಪ್ರಕಟಣೆ**

ದಿನಾಂಕ: 26.05.2005 ರಂದು ಹೊರಡಿಸಲಾದ ಈ ನ್ಯಾಯಾಲಯದ ಆದೇಶದಲ್ಲಿ ಪ್ರತಿವಾದಿಗಳು ಅರ್ಜಿದಾರರಾದ ಶ್ರೀಮತಿ ಯಶೋದ ಮತ್ತು ಮಕ್ಕಳಿಗೆ 4,23,880=00 ಗಳ ಪರಿಹಾರ ನೀಡುವಂತೆ ಆದೇಶಿಸಲಾಗಿದೆ.

ಅರ್ಜಿದಾರರಾದ ಶ್ರೀಮತಿ ಯಶೋದ ಕೋಂ ಲೇಟ್ ರಮೇಶ್ ಮತ್ತು ಮಕ್ಕಳು ಅವರನ್ನು ಹೊರತುಪಡಿಸಿ ಈ ವರೆಗೆ ಬೇರೆ ಯಾರೂ ಕ್ಲೈಮ್ ಅರ್ಜಿಯನ್ನು ದಾಖಲಿಸಿರುವುದಿಲ್ಲ. ಆದ ಕಾರಣ, ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಮೃತರ ವಾರಸುದಾರರು ಯಾರಾದರೂ ಇದ್ದಲ್ಲಿ ಪರಿಹಾರವನ್ನು ಕೋರಿ ತಕರಾರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಬಹುದಾಗಿದೆ. ಅವಧಿ ಮೀರಿದ ನಂತರ ಬರುವ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-2, ಚಿಕ್ಕಮಗಳೂರು.

ಪಿ.ಆರ್. 1639

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್-112/2006 ಎಫ್, ದಿನಾಂಕ: 15ನೇ ನವೆಂಬರ್ 2006**

**ಅರ್ಜಿದಾರರು:**

1) ಶ್ರೀಮತಿ ಗೌರಿಬಾಯಿ ಕೋಂ ಜೇಮ್ಲಾನಾಯ್ಕ
2) ಕುಮಾರಿ ರಾಧಾಬಾಯಿ ಬಿನ್ ಜೇಮ್ಲಾನಾಯ್ಕ
3) ಕುಮಾರಿ ಲಕ್ಷ್ಮೀಬಾಯಿ ಬಿನ್ ಜೇಮ್ಲಾನಾಯ್ಕ
4) ರಮೇಶ್ ನಾಯ್ಕ ಬಿನ್ ಜೇಮ್ಲಾನಾಯ್ಕ
5) ಲೋಕೇಶ್ ನಾಯ್ಕ ಬಿನ್ ಜೇಮ್ಲಾನಾಯ್ಕ
6) ಕುಮಾರ ಕುಮಾರ ಬಿನ್ ಜೇಮ್ಲಾನಾಯ್ಕ
ವಾಸ: ಅನುಪಿನಕಟ್ಟೆ, ಶಿವಮೊಗ್ಗ.

**ಪ್ರತಿವಾದಿಗಳು:**

ಬಾಬು ಯಾನೆ ಮಂಜುನಾಥ,
ಗಾಂಧಿ ಬಜಾರ್, 2ನೇ ಅಡ್ಡ ರಸ್ತೆ,
ಉಪ್ಪಾರ ಕೇರಿ, ಗರಡಿ ಮನೆ ಹತ್ತಿರ,
ಶಿವಮೊಗ್ಗ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಗೌರಿಬಾಯಿ ಇವರು ತಮ್ಮ ಗಂಡನಾದ ಶ್ರೀ ದಿ. ಜೇಮ್ಲಾನಾಯ್ಕ, ಇವರು 1ನೇ ಪ್ರತಿವಾದಿಗಳಾದ ಬಾಬು ಯಾನೆ ಮಂಜುನಾಥ, ಗಾಂಧಿ ಬಜಾರ್, 2ನೇ ಅಡ್ಡರಸ್ತೆ, ಉಪ್ಪಾರ ಕೇರಿ, ಶಿವಮೊಗ್ಗ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 16.04.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 1640

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್-109/2006 ಎಫ್, ದಿನಾಂಕ: 15ನೇ ನವೆಂಬರ್ 2006**

**ಅರ್ಜಿದಾರರು:**

1) ಶ್ರೀಮತಿ ಸವಿತ ಕೋಂ ಸುರೇಶಪ್ಪ ಅಲಿಯಾಸ್ ಸೂರಿ,
2) ಸಂಜು, ಬಿನ್ ಸುರೇಶಪ್ಪ ಅಲಿಯಾಸ್ ಸೂರಿ,
3) ಸಿಂದು, ಬಿನ್ ಸುರೇಶಪ್ಪ ಅಲಿಯಾಸ್ ಸೂರಿ,
4) ರಂಗಪ್ಪ,
ವ್ಯವಸಾಯ ವಾಲ್ಮೀಕಿ ನಾಯಕ್ ಜನಾಂಗ,
ವಾಸ: ಬಸವನಗಂಗೂರು ಗ್ರಾಮ, ಶಿವಮೊಗ್ಗ ತಾಲ್ಲೂಕು.

**ಪ್ರತಿವಾದಿಗಳು:**

1) ಶಿವಮೂರ್ತಿ ಬಿನ್ ಕರಿಬಸಪ್ಪ
2) ವಿರುಪಾಕ್ಷಪ್ಪ ಬಿನ್ ಕರಿಬಸಪ್ಪ,
ವ್ಯವಸಾಯ ಲಿಂಗಾಯುತ ಜನಾಂಗ,
ವಾಸ ಬಸವನಗಂಗೂರು ಗ್ರಾಮ,
ಶಿವಮೊಗ್ಗ ತಾಲ್ಲೂಕು.
3) ಪ್ರಧಾನ ವ್ಯವಸ್ಥಾಪಕರು, ನಿಗಮ ಕಾರ್ಯಾಲಯ, ಮೆಸ್ಕಾಂ, ಮಂಗಳೂರು.
4) ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಗ್ರಾಮೀಣ ಉಪ-ವಿಭಾಗ, ಮೆಸ್ಕಾಂ ಸರ್ವಜ್ಞ ವೃತ್ತ, ಶಿವಮೊಗ್ಗ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಸವಿತ ಇವರು ತಮ್ಮ ಗಂಡನಾದ ಶ್ರೀ ದಿ. ಸುರೇಶ ಇವರು 1ನೇ ಪ್ರತಿವಾದಿಗಳಾದ ಶಿವಮೂರ್ತಿ ಮತ್ತು ವಿರುಪಾಕ್ಷಪ್ಪ, ಬಸವನಗಂಗೂರು ಗ್ರಾಮ, ಶಿವಮೊಗ್ಗ ಇವರಲ್ಲಿ ಕೆಸಲಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 08.09.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1641

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್-110/2006 ಎಫ್, ದಿನಾಂಕ: 15ನೇ ನವೆಂಬರ್ 2006**

**ಅರ್ಜಿದಾರರು:**

1) ಶ್ರೀಮತಿ ಜಗನ್ನಾಥ ಡಿ ಬಿನ್ ಲೇಟ್ ಬಾಡು ಪೂಜಾರಿ,
2) ಶ್ರೀಮತಿ ಪುಷ್ಪಾವತಿ ಕೋಂ ಶ್ರೀ ಜಗನ್ನಾಥ ಡಿ,
3) ಭಾಗ್ಯಲತಾ ಬಿನ್ ಶ್ರೀ ಜಗನ್ನಾಥ ಡಿ,
ಪಾಲ್ದಾಡಿ ಮನೆ, ಸುಬ್ರಮಣ್ಯ ಪುರ, ಅಶೋಕನಗರ,
ಮಂಗಳೂರು-6.

**ಪ್ರತಿವಾದಿಗಳು:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ (ವಿದ್ಯುತ್), ಮೆಸ್ಕಾಂ, ಅತ್ತಾವರ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀ ಜಗನ್ನಾಥ ಡಿ. ಇವರು ತಮ್ಮ ಗಂಡನಾದ ದಿ. ಶ್ರೀ ರವಿಕಿರಣ್ ಇವರು 1ನೇ ಪ್ರತಿವಾದಿಗಳಾದ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಮೆಸ್ಕಾಂ, ಅತ್ತಾವರ, ಮಂಗಳೂರು ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 02.06.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1642

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಸಂಖ್ಯೆ: ಡಿಆರ್‌ಎಸ್:ಸಮಾಪನೆ:206:06-07, ದಿನಾಂಕ: 31ನೇ ಅಕ್ಟೋಬರ್ 2006**

**ವಿಷಯ:** ಶ್ರೀ ಜೈ ಸಂತೋಷಿಮಾತಾ ಮಹಿಳಾ ಗೃಹನಿರ್ಮಾಣ ಸಹಕಾರ ಸಂಘ (ನಿ) ಶಿವಮೊಗ್ಗ ಇದಕ್ಕೆ ಸಮಾಪನಾಧಿಕಾರಿ ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ಇವರ ಪತ್ರದ ಸಂಖ್ಯೆ: ಎಆರ್-24:ಸಮಾಪನೆ: 32:06-07, ದಿನಾಂಕ: 9.10.2006.

**ಪೀಠಿಕೆ:**

ಶ್ರೀ ಜೈ ಸಂತೋಷಿಮಾತಾ ಮಹಿಳಾ ಗೃಹನಿರ್ಮಾಣ ಸಹಕಾರ ಸಂಘ (ನಿ) ಶಿವಮೊಗ್ಗ, ಇದು ಬೈಲಾರೀತ್ಯಾ ನಡೆಸಿಕೊಂಡು ಹೋಗಲು ಸಂಘದ ಸದಸ್ಯರಿಗೆ ಯಾವುದೇ ಆಸಕ್ತಿ ಇಲ್ಲವೆಂದು ಹಾಗೂ ಸದರಿ ಸಂಘವು ಕಾರ್ಯನಿರ್ವಹಿಸುವ ಬಡಾವಣೆ ಮಧ್ಯದಲ್ಲಿ ತುಂಗಾ ಮೇಲ್ದಂಡೆ ಯೋಜನೆಯ ಮುಖ್ಯಕಾಲುವೆ ಹಾದುಹೋಗಿರುವುದರಿಂದ ಹಾಗೂ ಸಂಘದ ಬೊಮ್ಮನಕಟ್ಟೆ ಸರ್ವೆ ನಂ.129ರ 3.20 ಎಕರೆ ಜಮೀನಿನ ಬಗ್ಗೆ ಕಾನೂನಿ ಹಾಗೂ ಆಡಳಿತಾತ್ಮಕ ಸಮಸ್ಯೆಗಳಿರುವ ಕಾರಣ ಸಂಘದ ವಿಶೇಷಾಧಿಕಾರಿಗಳು ದಿನಾಂಕ: 13.9.2006 ರಂದು ನಡೆದ ವಿಶೇಷಾಧಿಕಾರಿಗಳ ಸಭೆಯಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲು ನಿರ್ಣಯಸಿರುವುದಾಗಿ ವರದಿಸಿ ಉಲ್ಲೇಖದ ರೀತ್ಯಾ ಶ್ರೀ ಜೈ ಸಂತೋಷಿಮಾತಾ ಮಹಿಳಾ ಗೃಹ ನಿರ್ಮಾಣ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಕೋರಿ ಉಲ್ಲೇಖದ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ, ಇವರು ಪ್ರಸ್ತಾವನೆ ಸಲ್ಲಿಸಿರುವ ಹಿನ್ನೆಲೆಯಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್‌ಎಸ್:ಸಮಾಪನೆ:206:06-07, ದಿನಾಂಕ: 31ನೇ ಅಕ್ಟೋಬರ್ 2006**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರು, ಕೆ. ಈಶ್ವರಸ್ವಾಮಿ ಕೆ.ಸಿ.ಎಸ್. ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 79(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: ಸಿಎಲ್ಎಂ:69:2001, ದಿನಾಂಕ: 21.11.2001ರ ರೀತ್ಯಾ ದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಶ್ರೀ ಜೈ ಸಂತೋಷಿಮಾತಾ ಮಹಿಳಾ ಗೃಹನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ, ಇದನ್ನು ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ.

ಸಹಕಾರ ಕಾಯಿದೆ ಕಲಂ 73 ರಲ್ಲಿ ದತ್ತವಾದ ಅಧಿಕಾರದನ್ವಯ, ಸಹಕಾರಿ ಅಭಿವೃದ್ಧಿ ಅಧಿಕಾರಿ ಹಾಗೂ ಮುಖ್ಯಗುಮಾಸ್ತರು, ಸಿಸಿಸಿ, ಜಿಲ್ಲಾ ಸಹಕಾರ ಸಂಘ ಬ್ಯಾಂಕ್ ನಿ., ಶಿವಮೊಗ್ಗ, ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ. ಸಮಾಪನಾಧಿಕಾರಿಯು ಈ ಆದೇಶದ ದಿನಾಂಕದಿಂದ 30 ದಿವಸದೊಳಗೆ ಸಮಾಪನಾ ಕಾರ್ಯನಿರ್ವಹಿಸಲು ಸೂಚಿಸಿದೆ.

ಈ ಆದೇಶವನ್ನು ದಿನಾಂಕ: 2ನೇ ನವೆಂಬರ್ 2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. ಸಹಕಾರ ಸಂಘಗಳ ಉಪ-ನಿಬಂಧಕರು,

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿ**

**ವಿಷಯ:** ಶ್ರೀ ಎಂ.ಎ. ಮಹಾದೇವ್, ಶೀಘ್ರಲಿಪಿಗಾರರು, ರೇಷ್ಮೆ ನಿರ್ದೇಶನಾಲಯ, ಬೆಂಗಳೂರು ಇವರ ವಿರುದ್ಧ ಶಿಸ್ತು ಕ್ರಮದ ಕುರಿತು.

**ಉಲ್ಲೇಖ:**
1) ತಿಳುವಳಿಕೆ ಪತ್ರ ಸಂಖ್ಯೆ: ಸಿ3:ಶಿಸ್ತು:ಲಿಪಿಕ-01:05-06, ದಿನಾಂಕ: 30.04.2005.
2) ಆದೇಶ ಸಂಖ್ಯೆ: ಸಿ3:ಶಿಸ್ತು:ಲಿಪಿಕ-01:05-06, ದಿನಾಂಕ: 13.06.2005.
3) ರೇಷ್ಮೆ ಉಪನಿರ್ದೇಶಕ, ರೇಷ್ಮೆ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ರೇಉನಿ: ಎಸ್‌ಪಿಎಸ್‌ಎಫ್:ಇವಿ-01:05-06, ದಿನಾಂಕ: 14.07.2006.
4) ತಿಳುವಳಿಕೆ ಪತ್ರ ಸಂಖ್ಯೆ: ಸಿ3:ಶಿಸ್ತು:ಲಿಪಿಕ-01:05-06, ದಿನಾಂಕ: 07.08.2006.

**ಪೀಠಿಕೆ:**

ಶ್ರೀ ಎಂ.ಎ. ಮಹಾದೇವ್, ಶೀಘ್ರಲಿಪಿಗಾರರು, ರೇಷ್ಮೆ ನಿರ್ದೇಶನಾಲಯ, ಬೆಂಗಳೂರು ಇವರು ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿ ಸರಕಾರಿ ಕೆಲಸಕ್ಕೆ ತೊಂದರೆ ಉಂಟು ಮಾಡುತ್ತಿದ್ದುದರಿಂದ ಇವರಿಗೆ ಸಾಕಷ್ಟು ಬಾರಿ ಜ್ಞಾಪನ, ಕಾರಣ ಕೇಳಿ ತಿಳುವಳಿಕೆ ಪತ್ರ ಜಾರಿ ಮಾಡಿ ಎಚ್ಚರಿಸಲಾಗಿಯೂ, ಇವರು ಗೈರು ಹಾಜರಿಯ ಅಭ್ಯಾಸವನ್ನು ಮುಂದುವರಿಸಿಕೊಂಡು ಹೋಗಿರುತ್ತಾರೆ. ಇವರ ಈ ನಡತೆಯಿಂದ ಕೆ.ಸಿ.ಎಸ್.ಆರ್. ನಿಯಮ 108ರ ಉಲ್ಲಂಘನೆಯಾಗಿದ್ದು ಹಾಗೂ ಇವರು ಸರಕಾರಿ ನೌಕರರಿಗೆ ಸಲ್ಲದ ರೀತಿಯ ವರ್ತನೆಯಾಗಿ ದುರ್ನಡತೆಯಾದ್ದರಿಂದ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11 ರಡಿಯಲ್ಲಿ ತಿಳುವಳಿಕೆ ಪತ್ರದೊಂದಿಗೆ ಆರೋಪ ಪಟ್ಟಿಯನ್ನು ಜಾರಿ ಮಾಡಲಾಯಿತು. ಆರೋಪವು ಈ ಕೆಳಕಂಡಂತೆ ಇರುತ್ತದೆ.

**ಆರೋಪ:**

ಶ್ರೀ ಎಂ.ಎ. ಮಹಾದೇವ್, ಶೀಘ್ರಲಿಪಿಗಾರರು, ಕೇಂದ್ರ ಕಛೇರಿ, ಬೆಂಗಳೂರು ಆದ ನೀವು ಕಛೇರಿ ಕೆಲಸಕ್ಕೆ ಪದೇ ಪದೇ ಗೈರು ಹಾಜರಿಯಾಗುತ್ತ ದಿನಾಂಕ: 2.8.2004 ರಿಂದ ಈ ವರೆಗೂ ಅನಧಿಕೃತ ಗೈರು ಹಾಜರಿಯಾಗಿರುತ್ತೀರಿ. ನೀವು ಕಛೇರಿ ಕೆಲಸಕ್ಕೆ ಗೈರು ಹಾಜರಿಯಾಗುವ ಮೊದಲು ಮೇಲಾಧಿಕಾರಿಗಳ ಅನುಮತಿ ಅಥವಾ ರಜೆ ಮಂಜೂರಾತಿ ಪಡೆದು ತೆರಳಬೇಕಾಗುತ್ತದೆ. ಆದರೆ ನೀವು ಕಛೇರಿ ಕೆಲಸಕ್ಕೆ ವ್ಯತ್ಯಯ ಉಂಟು ಮಾಡಿ ಅನಧಿಕೃತ ಗೈರು ಹಾಜರಿಯಾಗಿ ಕ.ನಾ.ಸೇ. ನಿಯಮ 108 ರಂತೆ ಶಿಕ್ಷಾರ್ಹ ತಪ್ಪನ್ನು ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 3(iii) ರನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುತ್ತೀರಿ.

ಶ್ರೀ ಎಂ.ಎ. ಮಹಾದೇವ್, ಶೀಘ್ರಲಿಪಿಗಾರರು ಇವರ ನಿವಾಸದ ವಿಳಾಸಕ್ಕೆ ರವಾನಿಸಿರುವ ನೋಂದಾಯಿತ ಅಂಚೆಯ ಆರೋಪ ಪಟ್ಟಿಯು ಜಾರಿಯಾಗದೆ ವಾಪಸ್ ಬಂದಿರುತ್ತದೆ. ಇದರಿಂದ ಆರೋಪದ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ವಿಚಾರಣಾಧಿಕಾರಿಯವರನ್ನು ನೇಮಿಸಲು ನಿರ್ಧರಿಸಿ ಉಲ್ಲೇಖ (2) ರನ್ವಯ ವಿಚಾರಣಾಧಿಕಾರಿಯನ್ನು ನೇಮಿಸಿ ಕೂಲಂಕುಷವಾಗಿ ವಿಚಾರಣೆ ನಡೆಸಲು ಆದೇಶಿಸಲಾಯಿತು.

ವಿಚಾರಣಾಧಿಕಾರಿಗಳು ಸಿ.ಸಿ.ಎ. ನಿಯಮ 11 ರಡಿ ನಿರ್ದಿಷ್ಟಪಡಿಸಿರುವ ವಿಧಿ ವಿಧಾನಗಳನ್ನು ಅನುಸರಿಸಿ ವಿಚಾರಣೆ ಆರಂಭಿಸಿರುತ್ತಾರೆ. ವಿಚಾರಣಾಧಿಕಾರಿಗಳು ದಿನಾಂಕ: 28.10.2005 ರಂದು ನಡೆಸಿರುವ ವಿಚಾರಣೆಗೆ ಶ್ರೀ ಎಂ.ಎ.ಮಹಾದೇವ್, ಶೀಘ್ರಲಿಪಿಗಾರರು ಹಾಜರಾಗಿ ಆರೋಗ್ಯ ಸರಿ ಇಲ್ಲದಿರುವ ಕಾರಣ ಪಾರ್ಶ್ವವಾಯುವಿನಿಂದ ಅಸ್ವಸ್ಥರಾಗಿ ನರಳುತ್ತಿರುವುದರಿಂದ ಕಛೇರಿ ಕೆಲಸಕ್ಕೆ ಹಾಜರಾಗಲು ಸಾಧ್ಯವಾಗುತ್ತಿಲ್ಲವೆಂದು ಹೇಳಿಕೆ ನೀಡಿರುತ್ತಾರೆ. ಆರೋಪಿತ ನೌಕರರೇ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ಲಿಖಿತ ಹೇಳಿಕೆ ನೀಡಿರುವುದರಿಂದ ವಿಚಾರಣಾಧಿಕಾರಿಗಳು ಆರೋಪವು ಸಾಬೀತಾಗಿದೆಯೆಂದು ನಿರ್ಣಯಿಸಿ ಉಲ್ಲೇಖ (3) ರಂತೆ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ.

ವಿಚಾರಣಾಧಿಕಾರಿಯವರ ನಿರ್ಣಯವನ್ನು ಉಲ್ಲೇಖ (4) ರಂತೆ ಶ್ರೀ ಎಂ.ಎ.ಮಹಾದೇವ್, ಶೀಘ್ರಲಿಪಿಗಾರರು ಇವರ ನಿವಾಸದ ವಿಳಾಸಕ್ಕೆ ನೋಂದಾಯಿತ ಅಂಚೆಯ ಮೂಲಕ ರವಾನಿಸಲಾಯಿತು. ಸದರಿಯವರ ವಿಚಾರಣಾ ವರದಿಯ ಪ್ರತಿಯನ್ನು ಸ್ವೀಕರಿಸಿ ಸ್ವೀಕೃತಿ ನೀಡಿರುತ್ತಾರೆ. ಆದರೆ ವಿಚಾರಣಾಧಿಕಾರಿಗಳ ನಿರ್ಣಯದ ಮೇಲೆ ನಿಗದಿತ ಅವಧಿಯಲ್ಲಿ ಯಾವುದೇ ಲಿಖಿತ ಹೇಳಿಕೆಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ.

ಶ್ರೀ ಎಂ.ಎ. ಮಹಾದೇವ್, ಶೀಘ್ರಲಿಪಿಗಾರರು ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಪರೀಕ್ಷಿಸಲ್ಪಟ್ಟ ದಾಖಲೆ, ಇವರ ವಿರುದ್ಧ ಮಾಡಲಾದ ಆರೋಪ ಹಾಗೂ ಇತರೆ ದಸ್ತಾವೇಜುಗಳನ್ನು ಪರಿಶೀಲಿಸಲಾಗಿ, ಶ್ರೀ ಎಂ.ಎ. ಮಹಾದೇವ್ ಕಛೇರಿ ಕೆಲಸಕ್ಕೆ ಪದೇ ಪದೇ ಗೈರು ಹಾಜರಾಗುತ್ತಿರುವುದು ದಾಖಲೆಗಳಿಂದ ದೃಢಪಡುತ್ತದೆ. ಇವರ ಅನಧಿಕೃತ ಗೈರು ಹಾಜರಿಯನ್ನು ಗಮನಿಸಿ ಇವರ ಮೇಲಾಧಿಕಾರಿಗಳು ಜ್ಞಾಪನ ಮತ್ತು ಕಾರಣ ಕೇಳಿ ತಿಳುವಳಿಕೆ ಪತ್ರವನ್ನು ನೀಡಿ ಸಾಕಷ್ಟು ಬಾರಿ ಇವರನ್ನು ಎಚ್ಚರಿಸಿರುತ್ತಾರೆ ಹಾಗೂ ಇವರ ವರ್ತನೆಯನ್ನು ತಿದ್ದಿಕೊಳ್ಳಲು ಎಚ್ಚರಿಸಿರುತ್ತಾರೆ. ಆದರೆ ಶ್ರೀ ಎಂ.ಎ.ಮಹಾದೇವ್ ರವರು ಯಾವುದೇ ಮುನ್ಸೂಚನೆ ನೀಡದೆ ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯಾಗುವ ಪ್ರವೃತ್ತಿಯನ್ನು ಬೆಳೆಸಿಕೊಂಡು ಬಂದಿರುವುದು ದಾಖಲೆಯಿಂದ ದೃಢಪಡುತ್ತದೆ. ಇವರು ಈ ಕೆಳಗಿನ ಅವಧಿಯಲ್ಲಿ ಅನಧಿಕೃತವಾಗಿ ಗೈರು ಹಾಜರಾಗಿದ್ದಾರೆ.

ದಿನಾಂಕ: 2.8.2004 ರಿಂದ 28.11.2005 ರವರೆಗೆ ಮತ್ತು 21.01.2006 ರಿಂದ 3.2.2006 ರವರೆಗೆ ಹಾಗೂ 13.02.2006 ರಿಂದ ಈ ವರೆಗೂ ಗೈರು ಹಾಜರಾಗಿರುತ್ತಾರೆ.

ಇವರ ಈ ನಡತೆಯು ಕೆ.ಸಿ.ಎಸ್.ಆರ್. ನಿಯಮ 108ರ ಉಲ್ಲಂಘನೆಯಾಗಿದ್ದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 3(iii)ರನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುವುದು ಸಾಬೀತಾಗಿರುತ್ತದೆ. ಹಾಗೂ ಮಹಾದೇವ್ ರವರಿಗೆ ಸರಕಾರಿ ಕೆಲಸದಲ್ಲಿ ಯಾವುದೇ ಆಸಕ್ತಿ ಇಲ್ಲದಿರುವುದು ಇವರ ಈ ವರ್ತನೆಯಿಂದ ದೃಢಪಡುತ್ತದೆ. ತನ್ನ ಮನೋಭಾವನೆ ಹಾಗೂ ನಡತೆಯನ್ನು ತಿದ್ದಿಕೊಂಡು ಸರಕಾರಿ ಕೆಲಸದಲ್ಲಿ ನಿಷ್ಠೆಯಿಂದ ಕಾರ್ಯನಿರ್ವಹಿಸಲು ಸೂಚಿಸಿದರೂ ಇವರು ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯನ್ನು ಮುಂದುವರೆಸಿಕೊಂಡು ಹೋಗುತ್ತಿರುವುದು ಇಲಾಖಾ ವಿಚಾರಣೆಯಿಂದ ದೃಢಪಡುತ್ತದೆ. ಆದುದರಿಂದ ಈ ಪ್ರಕರಣದಲ್ಲಿ ವಿಧಿಸುವ ಈ ಆದೇಶ.

**ಆದೇಶ ಸಂಖ್ಯೆ: ಸಿ3:ಶಿಸ್ತು:ಲಿಪಿಕ-01:2005-06, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2006**

ಪೀಠಿಕೆಯಲ್ಲಿ ವಿವರಿಸಿರುವಂತೆ ಹಾಗೂ 1957 ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು:ಶಿಸ್ತು ಪ್ರಾಧಿಕಾರಿಯಾದ ನಾನು ಸದರಿ ನಿಯಮ 8(VIII) ರಂತೆ ಶ್ರೀ ಎಂ.ಎ. ಮಹಾದೇವ್, ಶೀಘ್ರಲಿಪಿಗಾರರು, ರೇಷ್ಮೆ ನಿರ್ದೇಶನಾಲಯ, ಬೆಂಗಳೂರು ಇವರನ್ನು ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ
ನಿರ್ದೇಶಕರು, ಬೆಂಗಳೂರು.

ಪಿ.ಆರ್. 1644

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ.**

**ವಿಷಯ:** ಸಮಾಪನೆಗೊಂಡಿರುವ ರೂಪಾಯಿ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಪುನಃಶ್ಚೇತನಗೊಳಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಸಮ ಸಂಖ್ಯೆ ಆದೇಶ ದಿನಾಂಕ: 16.03.2006.

2) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-11/06-07, ದಿನಾಂಕ: 20.06.06.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ಸಂಖ್ಯೆ: ಸನಿ 31/ ಸಮಾಪನೆ/ರೂಪಾಯಿಪಸಸಂ/2006-07, ದಿನಾಂಕ: 03.11.2006.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ 3-4 ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ದಾವಣಗೆರೆ, ವೃತ್ತ-2 ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ನಂತರ ಉಲ್ಲೇಖ (2)ರ ಆದೇಶದ ರೀತ್ಯಾ ಹಾಲಿ ಸಮಾಪನಾಧಿಕಾರಿಗಳ ಸ್ಥಾನಕ್ಕೆ ಶ್ರೀ ಎನ್.ಜಿ.ರುದ್ರಪ್ಪ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕಛೇರಿ ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ದಿನಾಂಕ: 20.08.2006 ರಂದು ಶ್ರೀ ಬಿ.ಎನ್. ಕೃಷ್ಣಮೂರ್ತಿ ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಂಘದ ಸರ್ವಸದಸ್ಯರ ಸಭೆಯಲ್ಲಿ ರೂಪಿಸಿಕೊಂಡಿರುವ 5 ವರ್ಷಗಳ ಕ್ರಿಯಾಯೋಜನೆಯ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಘವನ್ನು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನಿಸಿರುತ್ತಾರೆ. ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರು ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಶಿಫಾರಸ್ಸು ಮಾಡಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘವನ್ನು ಮುಂದುವರಿಸಿ ಕೊಂಡು ಹೋಗಲು ಅನುಮತಿ ನೀಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ವಿವರ | 2006-07 | 2007-08 | 2008-09 | 2009-10 | 2010-11 |
|---|---|---|---|---|---|---|
| 01 | ಸದಸ್ಯತ್ವ | 500 | 100 | 1500 | 2000 | 3000 |
| 02 | ಷೇರು ಸಂಗ್ರಹಣೆ | 0.50 | 1.00 | 1.50 | 2.00 | 3.00 |
| 03 | ಠೇವಣಿ | 1.00 | 2.00 | 3.50 | 5.00 | 8.00 |
| 04 | ಸಾಲ ನೀಡಿಕೆ | 1.00 | 2.00 | 3.00 | 4.00 | 6.00 |
| 05 | ಸಾಲ ವಸೂಲಿ | 1.00 | 2.00 | 3.00 | 4.00 | 6.00 |

**ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್-35/2005-06, ದಿನಾಂಕ: 16ನೇ ನವೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆ, ಸಹಕಾರ ಸಂಘಗಳ ಉಪ ನಿಬಂಧಕರು, ಬಿ.ಕುಬೇರಪ್ಪ ಆದ ನಾನು ರೂಪಾಯಿ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ ಇದರ ಉಲ್ಲೇಖ (1)ರ ಸಮಾಪನಾದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾ ಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ಶ್ರೀ ಎನ್.ಜಿ.ರುದ್ರಪ್ಪ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾ ಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ: 16.11.2006 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 1645 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಶಿಕ್ಷಣ ಇಲಾಖೆ**

**ಅಧಿಸೂಚನೆ ಸಂಖ್ಯೆ: ಇಡಿ 366 ಯುಪಿಸಿ 2006, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2006**

ನೆಹರು ಸ್ಮಾರಕ ಕಾಲೇಜು, ಸುಳ್ಯ ಇಲ್ಲಿ ವಾಣಿಜ್ಯಶಾಸ್ತ್ರ ಅರೆಕಾಲಿಕ ಉಪನ್ಯಾಸಕರಾಗಿ 1993-94 ಮತ್ತು 1994-95ನೇ ಸಾಲುಗಳಲ್ಲಿ ಕಾರ್ಯನಿರ್ವಹಿಸಿರುವ ಶ್ರೀಮತಿ ರತ್ನಾವತಿ ಡಿ. ರವರು ಎಸ್.ಎಲ್.ಇ.ಟಿ. ಅಥವಾ ಎಂ.ಫಿಲ್, ಅನ್ನು ಪಾಸು ಮಾಡದೇ ಇರುವ ಕಾರಣ ಹಾಗೂ ಇವರ ಹುದ್ದೆಯು ಪ್ರಸ್ತುತ ಈ ಕಾಲೇಜಿನಲ್ಲಿ ಲಭ್ಯವಿಲ್ಲದ ಪ್ರಯುಕ್ತ ಇವರ ಸೇವೆಯನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ

ಉಪನ್ಯಾಸಕರ ಸೇವಾ ವಿಲೀನತೆ (ವಿಶೇಷ) ನಿಯಮಗಳು 2003 ರಡಿಯಲ್ಲಿನ ಅವಕಾಶ ಮತ್ತು ಇದಕ್ಕೆ ಸಂಬಂಧಿಸಿದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸುಳ್ಯದ ನೆಹರು ಸ್ಮಾರಕ ಕಾಲೇಜಿನ ಆಡಳಿತ ಮಂಡಳಿಯ ವ್ಯಾಪ್ತಿಗೆ ಒಳಪಡುವ ಪದವಿ ಪೂರ್ವ ಕಾಲೇಜಿನಲ್ಲಿ ಒಂದು ಸಾಮಾನ್ಯ ವರ್ಗಕ್ಕೆ ಮೀಸಲಾಗಿರುವ ಹುದ್ದೆಗೆ ಎದುರಾಗಿ ರಾಜ್ಯ ವೇತನ ಶ್ರೇಣಿ ರೂ.6,000-11,200 ರಲ್ಲಿ ವಿಲೀನಗೊಳಿಸಲಾಗಿದೆ.

**ಶ್ರೀಮತಿ ರತ್ನಾವತಿ ಡಿ. ರವರ ವಿವರ:**

| ಅಭ್ಯರ್ಥಿಯ ಹೆಸರು | ವಿಷಯ | ವಿದ್ಯಾರ್ಹತೆ | ಜನ್ಮ ದಿನಾಂಕ: | ಪ್ರವರ್ಗ | ಸೇವೆ ಸಲ್ಲಿಸಿದ ಕಾಲೇಜಿನ ಹೆಸರು | ನಿರಾಕ್ಷೇಪಣಾ ಪತ್ರ ನೀಡಿರುವ ಕಾಲೇಜು | ಸೇವೆಗೆ ಸೇರಿದ ದಿನಾಂಕ: |
|---|---|---|---|---|---|---|---|
| ಶ್ರೀಮತಿ ರತ್ನಾವತಿ ಡಿ. | ವಾಣಿಜ್ಯಶಾಸ್ತ್ರ | MCom., 59.44% | 29.05.1966 | ಸಾಮಾನ್ಯ | ಸುಳ್ಯದ ನೆಹರು ಸ್ಮಾರಕ ಕಾಲೇಜು | ಸುಳ್ಯದ ನೆಹರು ಸ್ಮಾರಕ ಪದವಿ ಪೂರ್ವ ಕಾಲೇಜು | 02.07.1993 |

1) ಇವರ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ/ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
2) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.
3) ಕಾಲೇಜಿನ ಪ್ರಾಂಶುಪಾಲರು ಇವರ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ/ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿ ಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

2. ಈ ಆದೇಶದಲ್ಲಿ ಕಾಣಿಸಿರುವ ಸೇವಾ ಜೇಷ್ಠತೆಯಲ್ಲಿ ನ್ಯೂನತೆಗಳು ಕಂಡು ಬಂದಲ್ಲಿ ಸರಿಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

3. ಇವರು ಈ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1647

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ-4,

ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಜಿಲ್ಲಾ ಪಂಚಾಯತ್ ತುಮಕೂರು

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರವರ ಕಾರ್ಯಾಲಯ, ತುಮಕೂರು (ದಕ್ಷಿಣ) ಜಿಲ್ಲೆ

## ಅಧಿಕೃತ ಜ್ಞಾಪನ

**ಸಂಖ್ಯೆ: ಇ5:ಅಗ್ರೈಹಾಜ:138:05-06, ದಿನಾಂಕ: 25ನೇ ಸೆಪ್ಟೆಂಬರ್ 2006**

**ವಿಷಯ:** ಶ್ರೀ ಎನ್. ನಾಗರಾಜು, ಗ್ರೂಪ್ ಡಿ, ನೌಕರರು ಸರ್ಕಾರಿ ಪ್ರೌಢಶಾಲೆ, ದಬ್ಬೆಘಟ್ಟ ತುರುವೇಕೆರೆ ತಾ. ರವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಉಲ್ಲೇಖ:**
1) ಉಪ ನಿರ್ದೇಶಕರು ಸಾ:ಶಿ:ಇ:ತುಮಕೂರು(ದ)ರವರ ಪತ್ರ ಸಂಖ್ಯೆ: ಇ1:10068:ನೇಮಕ:28:87-88, ದಿನಾಂಕ: 25.8.88.
2) ಮುಖ್ಯ ಶಿಕ್ಷಕರು ಸರ್ಕಾರಿ ಪ್ರೌ:ಶಾಲೆ ದಬ್ಬೇಗಟ್ಟ, ತುರುವೇಕೆರೆ ತಾ, ರವರ ಪ.ಸಂ:92:05-06, ದಿನಾಂಕ: 6.12.2005.
3) ಮುಖ್ಯ ಶಿಕ್ಷಕರು, ಸರ್ಕಾರಿ ಪ್ರಾ:ಶಾಲೆ ದಬ್ಬೆಗಟ್ಟ, ತುರುವೇಕೆರೆ ತಾ, ರವರು ನೀಡಿರುವ ಜ್ಞಾಪನಾ ಪತ್ರದ ಸಂಖ್ಯೆ: 40:04-05, ದಿನಾಂಕ: 20.12.2004, 7.1.2005, 27.1.2005.
4) ಈ ಕಛೇರಿ ಪತ್ರ ಸಮಸಂಖ್ಯೆ: ದಿನಾಂಕ: 20.12.2005, 23.2.2006.
5) ವಿಚಾರಣಾಧಿಕಾರಿಗಳ ವರದಿ ದಿನಾಂಕ: 5.8.06.
6) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:18:ನೇ:ಇವಿ:2001, ದಿನಾಂಕ: 14.9.2001.

**ಪ್ರಸ್ತಾವನೆ:**

ಉಲ್ಲೇಖಿತ (1)ರ ಅಧಿಕೃತ ಜ್ಞಾಪನದನ್ವಯ ಶ್ರೀ ಎನ್.ನಾಗರಾಜು, ಇವರು ಅನುಕಂಪದ ಆಧಾರದ ಮೇಲೆ ಗ್ರೂಪ್ ಡಿ, ನೌಕರರಾಗಿ ನೇಮಕ ಹೊಂದಿ ದಿನಾಂಕ: 27.8.88 ರಂದು ಕೊರಟಗೆರೆ ತಾಲ್ಲೂಕಿನ ಸರ್ಕಾರಿ ಪ:ಪೂ:ಕಾಲೇಜಿನಲ್ಲಿ ಖಾಯಂ ಪೂರ್ವ ಸೇವಾ ಅವಧಿ ಮೇಲೆ ಕರ್ತವ್ಯಕ್ಕೆ ಹಾಜರಾಗಿದ್ದು, ದಿನಾಂಕ: 4.6.94 ರಲ್ಲಿ ವರ್ಗಾವಣೆ ಹೊಂದಿ ಸರ್ಕಾರಿ ಪ್ರೌಢಶಾಲೆ ದಬ್ಬೆಗಟ್ಟ, ತುರುವೇಕೆರೆ ತಾ, ಶಾಲೆಯಲ್ಲಿ ದಿನಾಂಕ: 22.6.94 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಉಲ್ಲೇಖಿತ (2) ಮತ್ತು (3) ಪತ್ರದಲ್ಲಿ ಸದರಿ ನೌಕರರು ಸೇವಾ ಅವಧಿಯಲ್ಲಿ ದಿನಾಂಕ: 27.8.88 ರಿಂದ 6.12.05 ರವರೆವಿಗೆ ಒಟ್ಟು

3588 ದಿನಗಳು ಗೈರು ಹಾಜರಿಯಾಗಿರುವುದಾಗಿ ಹಾಗೂ ದಿನಾಂಕ: 7.12.2005 ರಿಂದ ಮುಂದುವರಿದು, ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವುದಾಗಿ ವರದಿ ಮಾಡಿರುತ್ತಾರೆ.

ಸದರಿ ನೌಕರರ ಗೈರು ಹಾಜರಿ ಸಂಬಂಧ ಉಲ್ಲೇಖಿತ (4)ರ ದಿನಾಂಕ: 20.12.2005ರ ಪತ್ರದಲ್ಲಿ ಆರೋಪ ಪಟ್ಟಿ ಜಾರಿಗೊಳಿಸಿ ರಕ್ಷಣಾ ಹೇಳಿಕೆ ನೀಡಲು ತಿಳಿಸಲಾಗಿತ್ತು. ನಿಗದಿತ ವೇಳೆಯಲ್ಲಿ ರಕ್ಷಣಾ ಹೇಳಿಕೆ ಬಾರದಿದ್ದರಿಂದ ದಿನಾಂಕ: 23.2.06 ರಂದು ವಿಚಾರಣೆಗಾಗಿ ಅಧಿಕಾರಿಗಳನ್ನು ನೇಮಕ ಮಾಡಲಾಗಿತ್ತು.

ಉಲ್ಲೇಖಿತ (5) ರಲ್ಲಿ ವಿಚಾರಣಾಧಿಕಾರಿಗಳು ಸದರಿ ನೌಕರರಿಗೆ ದಿನಾಂಕ: 22.4.2006, 27.4.2006, 17.5.2006 ಮತ್ತು 9.6.2006 ರಂದು ವಿಚಾರಣೆಗೆ ಹಾಜರಾಗುವಂತೆ ತಿಳಿಸಿದ್ದು, ಆ ದಿನಗಳಂದು ವಿಚಾರಣೆಗೆ ಹಾಜರಾಗಿರುವುದಿಲ್ಲ. ಆರೋಪಿತ ನೌಕರರ ಸಹೋದರ ಶ್ರೀ ನರಸಿಂಹಮೂರ್ತಿ ರವರು ದಿನಾಂಕ: 9.6.06 ರಂದು ಹಾಜರಾಗಿ ಕಾಲಾವಕಾಶ ನೀಡಲು ಕೋರಿದ ಮೇರೆಗೆ ದಿನಾಂಕ: 2.8.06 ರವರೆವಿಗೆ ಕಾಲಾವಕಾಶ ನೀಡಿ ಅಂತಿಮ ವಿಚಾರಣೆ ಇಟ್ಟುಕೊಳ್ಳಲಾಗಿದ್ದು, ಆ ವಿಚಾರಣ ದಿನದಂದು ಯಾರೂ ವಿಚಾರಣೆಗೆ ಹಾಜರಾಗದೇ ಇದ್ದುದರಿಂದ ಹಾಗೂ ಸಾಕ್ಷಿದಾರರಾದ ಆ ಶಾಲಾ ಮುಖ್ಯ ಶಿಕ್ಷಕರು, ಸದರಿ ನೌಕರರ ಗೈರು ಹಾಜರಿ ಬಗ್ಗೆ ಹಾಜರಾತಿ ವಹಿ ಮತ್ತು ಮುಂದುವರಿದು ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ನೀಡಿರುವ ಲಿಖಿತ ಹೇಳಿಕೆ ಪರಿಶೀಲಿಸಿ ಸದರಿಯವರ ಮೇಲಿನ ಆರೋಪ ಸಾಬೀತಾಗಿರುವುದಾಗಿ ವರದಿ ಮಾಡಿರುತ್ತಾರೆ.

ಶ್ರೀ ಎನ್.ನಾಗರಾಜು, ಗ್ರೂಪ್ ಡಿ, ನೌಕರರು ಆದ ಇವರು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಸಮರ್ಪಕವಾಗಿ ಶಾಲಾ ಕೆಲಸಕ್ಕೆ ಹಾಜರಾಗದೇ ಅನಧಿಕೃತ ಗೈರು ಹಾಜರಾಗುವ ಮೂಲಕ ಕರ್ತವ್ಯ ಚ್ಯುತಿ ಎಸಗಿರುವುದರಿಂದ ಮತ್ತು ಇವರ ಸೇವೆ ತೃಪ್ತಿಕರವಾಗಿಲ್ಲದೇ ಇರುವುದರಿಂದ ಹಾಗೂ ಇವರಿಗೆ ಕರ್ತವ್ಯ ನಿರ್ವಹಿಸಲು ಆಸಕ್ತಿ ಇಲ್ಲದಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ ಸೇವಾ) ನಿಯಮಗಳು 1977ರ ನಿಯಮ (6) ಮತ್ತು ಕೆ.ಸಿ.ಎಸ್.ಆರ್. ನಿಯಮ 108ರ ಅನ್ವಯ ಕ್ರಮ ಕೈಗೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎನ್.ನಾಗರಾಜು ಗ್ರೂಪ್ ಡಿ, ಸರ್ಕಾರಿ ಪ್ರೌಢಶಾಲೆ, ದಬ್ಬೇಗಟ್ಟ, ತುರುವೇಕೆರೆ ತಾಲ್ಲೂಕು ಆದ ಇವರು ಖಾಯಂ ಪೂರ್ವ ಸೇವಾ ಅವಧಿ ಮೇಲೆ ನೇಮಕಾತಿ ಹೊಂದಿ ದಿನಾಂಕ: 27.8.88 ರಿಂದ 6.12.2005 ರವರೆಗೆ ಒಟ್ಟು 3588 ದಿನಗಳು ಮತ್ತು ಮುಂದುವರಿದು ಈ ದಿನಾಂಕ: (23.09.06) ರವರೆವಿಗೆ ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ಇವರಿಗೆ ಸರ್ಕಾರಿ ಸೇವೆಯಲ್ಲಿ ಆಸಕ್ತಿ ಇಲ್ಲದಿರುವುದರಿಂದ ಮತ್ತು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಕರ್ತವ್ಯ ಚ್ಯುತಿ ಎಸಗಿರುವುದರಿಂದ ತಕ್ಷಣದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್.ಆರ್. ನಿಯಮ 108, ಮತ್ತು ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977ರ ನಿಯಮ (6)ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

**ಎನ್.ಎಲ್. ಗಂಗಾಧರಗೌಡ**
ಉಪ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು,
ಸಾ:ಶಿ:ಇಲಾಖೆ, ತುಮಕೂರು (ದ).

ಪಿ.ಆರ್. 1646

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–10/2006–07, ದಿನಾಂಕ: 16ನೇ ನವೆಂಬರ್ 2006**

**ವಿಷಯ:** ಸ್ಥಗಿತಗೊಂಡಿರುವ ಅಷ್ಟಲಕ್ಷ್ಮೀ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಹರಿಹರ, ಹರಿಹರ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 26.05.2006.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 06.07.2006.
3) ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರ ಪ್ರಸ್ತಾವನೆ ದಿನಾಂಕ: 4.11.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರು ಸಂಘದ ನಿರ್ದೇಶಕರಿಗೆ ಜಾರಿಮಾಡಿಸಿ ಸ್ವೀಕೃತಿ ವರದಿಯನ್ನು ಉಲ್ಲೇಖ (3)ರ ರೀತ್ಯಾ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವು ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅಷ್ಟಲಕ್ಷ್ಮೀ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಹರಿಹರ, ಹರಿಹರ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 16.11.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 1648 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-32/2006-07, ದಿನಾಂಕ: 16ನೇ ನವೆಂಬರ್ 2006**

**ವಿಷಯ:** ಸ್ಥಗಿತಗೊಂಡಿರುವ ವಾಸನ ಹತ್ತಿ ಕೈ ಮಗ್ಗ ನೇಕಾರರ ಉತ್ಪಾದನೆ ಮತ್ತು ಮಾರಾಟ ಸಹಕಾರ ಸಂಘ ನಿ., ವಾಸನ, ಹರಿಹರ ತಾ: ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 11.08.2006.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 22.08.2006
3) ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರ ಪ್ರಸ್ತಾವನೆ ದಿನಾಂಕ: 4.11.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರು ಸಂಘದ ನಿರ್ದೇಶಕರಿಗೆ ಜಾರಿಮಾಡಿಸಿ ಸ್ವೀಕೃತಿ ವರದಿಯನ್ನು ಉಲ್ಲೇಖ (3)ರ ರೀತ್ಯಾ ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವು ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ವಾಸನ ಹತ್ತಿ ಕೈ ಮಗ್ಗ ನೇಕಾರರ ಉತ್ಪಾದನೆ ಮತ್ತು ಮಾರಾಟ ಸಹಕಾರ ಸಂಘ ನಿ., ವಾಸನ, ಹರಿಹರ ತಾ: ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಜವಳಿ ನಿರೀಕ್ಷಕರು, ಉಪನಿರ್ದೇಶಕರ ಕಛೇರಿ, ಕೈಮಗ್ಗ ಮತ್ತು ಜವಳಿ ಇಲಾಖೆ, ಚಿತ್ರದುರ್ಗ, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 16.11.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 1649 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಫ್.ಸಿ./ಸಿಆರ್-60/2006**

**ಅರ್ಜಿದಾರರು:**

1) ಗಂಗಾಧರಗೌಡ
2) ಶ್ರೀಮತಿ ಶಾಂತಮ್ಮ
ನಂ.28, 1ನೇ ಕ್ರಾಸ್, 1ನೇ ಮೇನ್, ವಿಲ್ಸನ್ ಗಾರ್ಡನ್ ಕೋ ಆಪರೇಟಿವ್ ಸೊಸೈಟಿ, 7ನೇ ಫೇಜ್, ಜೆ.ಪಿ.ನಗರ, ಬೆಂಗಳೂರು-78.

**ಪ್ರತಿವಾದಿಗಳು:**

1) ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ನಂ.44/45, ಲಿಯೊ ಶಾಪಿಂಗ್ ಕಾಂಪ್ಲೆಕ್ಸ್, ರೆಸಿಡೆನ್ಸಿ ರೋಡ್, ಬೆಂಗಳೂರು-25.
2) ಕೆ.ಜೆ.ಪುಟ್ಟರಾಜು, ಲಿಯೊ ಸ್ಕೂಲ್, ದೇವಿರಮ್ಮನಹಳ್ಳಿ ನಂಜಾ, ಮೈಸೂರು.

**ಪ್ರಕಟಣೆ ದಿನಾಂಕ: 14.11.2006**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 16.9.2006 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಹೆಚ್.ಜಿ.ರವಿಕುಮಾರ್, 24 ವರ್ಷ ಅವರು ಮೇಲೆ ವಿಳಾಸಿಸಿರುವ 2ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ವಿನ್ಸೆಂಟ್ ಕನ್ಸೆಸೊ**

ಪಿ.ಆರ್. 1650

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಬೆಂಗಳೂರು ವಿಭಾಗ-2, ಬೆಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಫ್.ಸಿ./ಸಿಆರ್-61/2006**

**ಅರ್ಜಿದಾರರು:**

1) ಶ್ರೀಮತಿ ಲಕ್ಷ್ಮೀ
2) ನರಸಿಂಹಲು
3) ನರಸಮ್ಮ
ರೈಲ್ವೆ ಲೇನ್ ಹತ್ತಿರ, ಸರೋಜಮ್ಮ ವಟಾರ್, ಗೌರಿಪಾಳ್ಯ, ಬೆಂಗಳೂರು-26.

**ಪ್ರತಿವಾದಿಗಳು:**

1) ಶ್ರೀ ವೈ.ಎಂ. ಪಟ್ಟಾಭಿರಾಮಯ್ಯ, ನಂ.6, ಶ್ರೀ ರಾಮ ಮಂದಿರ ರಸ್ತೆ, ಬಸವನಗುಡಿ, ಬೆಂಗಳೂರು-04.
2) ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ನಂ.19/11, 3ನೇ ಕ್ರಾಸ್, ಚಿಕ್ಕಣ್ಣ ಗಾರ್ಡನ್, ಶಂಕರಮಠ ಕಾಂಪೌಂಡ್, ಚಾಮರಾಜಪೇಟೆ, ಬೆಂಗಳೂರು-18.

**ಪ್ರಕಟಣೆ ದಿನಾಂಕ: 14.11.2006**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 5.9.2006 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ನರಸಿಂಹಲು, 30 ವರ್ಷ ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ವಿನ್ಸೆಂಟ್ ಕನ್ಸೆಸೊ**

ಪಿ.ಆರ್. 1651

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಬೆಂಗಳೂರು ವಿಭಾಗ-2, ಬೆಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಫ್.ಸಿ./ಸಿಆರ್-62/2006**

**ಅರ್ಜಿದಾರರು:**

1) ಶ್ರೀ ಈರಪ್ಪ
2) ಶ್ರೀಮತಿ ಲಕ್ಷ್ಮಮ್ಮ
ಕೋಡಿಗೆಹಳ್ಳಿ ವಿಲೇಜ್,
ದೊಡ್ಡಬಳ್ಳಾಪುರ ತಾಲ್ಲೂಕು,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಪ್ರತಿವಾದಿಗಳು:**

1) ಶ್ರೀ ಧನರಾಜ್, ರಾಮಸ್ವಾಮಿ, ಶಾಂಭವಿ ಟೂರ್ಸ್ ಅಂಡ್ ಟ್ರಾವೆಲ್ಸ್, ಓ.ಟಿ.ಸಿ. ರಸ್ತೆ, ಬೆಂಗಳೂರು.
2) ದಿ ಬ್ರಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., ನಂ.6, 7ನೇ ಮೇನ್, 80 ಅಡಿ ರಸ್ತೆ, 3ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-34.

**ಪ್ರಕಟಣೆ ದಿನಾಂಕ: 14.11.2006**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 1.9.2006 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಶಿವಕುಮಾರ್, 22 ವರ್ಷ ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ವಿನ್ಸೆಂಟ್ ಕನ್ಸೆಸೊ**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಬೆಂಗಳೂರು ವಿಭಾಗ-2, ಬೆಂಗಳೂರು.

ಪಿ.ಆರ್. 1652

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಫ್.ಸಿ./ಸಿಆರ್-63/2006**

**ಅರ್ಜಿದಾರರು:**

1) ಈರಪ್ಪ
2) ಶ್ರೀಮತಿ ಲಕ್ಷ್ಮಮ್ಮ
ತುಬಗೆರೆ ವಿಲೇಜ್ ಮತ್ತು ಅಂಚೆ,
ದೊಡ್ಡಬಳ್ಳಾಪುರ ತಾಲ್ಲೂಕು,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಪ್ರತಿವಾದಿಗಳು:**

1) ಶ್ರೀಮತಿ ಮಂಜುಳ, ಸೌತೇನಹಳ್ಳಿ ವಿಲೇಜ್, ತುಬಗೆರೆ ಹೋಬಳಿ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.
2) ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., ನಂ.19/11, 3ನೇ ಕ್ರಾಸ್, ಚಿಕ್ಕಣ್ಣ ಗಾರ್ಡನ್, ಶಂಕರಮಠ ಕಾಂಪೌಂಡ್, ಚಾಮರಾಜಪೇಟೆ, ಬೆಂಗಳೂರು-18.

**ಪ್ರಕಟಣೆ ದಿನಾಂಕ: 14.11.2006**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 7.9.2006 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಟಿ.ಕೆ.ಮೂರ್ತಿ ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ವಿನ್ಸೆಂಟ್ ಕನ್ಸೆಸೊ**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಬೆಂಗಳೂರು ವಿಭಾಗ-2, ಬೆಂಗಳೂರು.

ಪಿ.ಆರ್. 1653

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಫ್.ಸಿ./ಸಿಆರ್-64/2006**

**ಅರ್ಜಿದಾರರು:**
ಶ್ರೀಮತಿ ಸ್ವೇನ್ ಮತ್ತು ಇತರರು,
ಸ್ಯಾಮಸುಂದರಪುರ ವಿಲೇಜ್ ಮತ್ತು
ಅಂಚೆ, ತಿಂಡ್ಲು ಪೊಲೀಸ್ ಸ್ಟೇಷನ್,
ಬದ್ರಕ್ ಡಿಸ್ಟ್ರಿಕ್ಟ್, ಒರಿಸ್ಸಾ.

**ಪ್ರತಿವಾದಿಗಳು:**
1) ಮೆ: ವಿಜಯ ನಿರ್ಮಾಣ ಕಂ. ಪ್ರೈ. ಲಿ., ನಂ.101, ಪ್ಯಾಲೇಸ್ ವೀವ್ ಅಪಾರ್ಟ್‌ಮೆಂಟ್, ಸದಾಶಿವನಗರ, ಬಳ್ಳಾರಿ ರೋಡ್, ಬೆಂಗಳೂರು-80.
2) ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಡಿವಿಜನಲ್ ಆಫೀಸ್, ನಂ.2, ಅಪ್‌ಸ್ಟೇರ್ಸ್ ಆಂಧ್ರ ಬ್ಯಾಂಕ್, ಅಂಚೆ ಪೆಟ್ಟಿಗೆ ಸಂಖ್ಯೆ: 774, ಪಟಿಮಾತಾ, ವಿಜಯವಾಡಾ, ಆಂಧ್ರ ಪ್ರದೇಶ್.

**ಪ್ರಕಟಣೆ ದಿನಾಂಕ: 14.11.2006**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 26.9.2006 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಮುರಳೀಧರ್ ಸ್ವೇನ್ ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ವಿನ್ಸೆಂಟ್ ಕನ್ಸೆಸೊ**
ಪಿ.ಆರ್. 1654
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಬೆಂಗಳೂರು ವಿಭಾಗ-2, ಬೆಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಫ್.ಸಿ./ಸಿಆರ್-66/2006**

**ಅರ್ಜಿದಾರರು:**
1) ಶ್ರೀ ನಾಗಪ್ಪ
2) ಗೌರಮ್ಮ
ನಂ.1-ಸಿ, 503, ಇಸ್ರೋ ಕ್ವಾರ್ಟರ್ಸ್,
ವಿಜಯನಗರ ಕ್ಲಬ್ ಹತ್ತಿರ,
ವಿಜಯನಗರ, ಬೆಂಗಳೂರು-40.

**ಪ್ರತಿವಾದಿಗಳು:**
ಮೆ: ಬೆಂಗಳೂರು ಕೆಮಿಕಲ್ ಕಾರ್ಪೋರೇಷನ್ ಫ್ಯಾಕ್ಟರಿ ನಂ.22/ಎ, 2ನೇ ಸ್ಟೇಜ್, ಕುಂಬಳಗೋಡು ಇಂಡಸ್ಟ್ರಿಯಲ್ ಟೌನ್, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ಜಿಲ್ಲೆ.

**ಪ್ರಕಟಣೆ ದಿನಾಂಕ: 14.11.2006**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 25.9.2006 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಕೆ.ಎನ್.ಗಿರೀಶ್, 18 ವರ್ಷ ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ವಿನ್ಸೆಂಟ್ ಕನ್ಸೆಸೊ**
ಪಿ.ಆರ್. 1655
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಬೆಂಗಳೂರು ವಿಭಾಗ-2, ಬೆಂಗಳೂರು.

